ISSN 2320 - 9941



ಸಾಹಿತ್ಯ-ಸಂಸ್ಕೃತಿ ಮಾಸಿಕ

# ಪ್ರತಿಸ್ಪಂದ

ಬೆಲೆ : 10 ರೂ

## ಕೊಡು - ಕೊಳ್ಳುವಿಕೆಗಳ ಸಂಕರ ...

ಸಂಪುಟ : 1 ಸಂಚಿಕೆ : 8 ಆಗಸ್ಟ್ 2013

Romeo & Juliet

* ವಿಲಿಯಂ ಷೇಕ್ಸಪಿಯರ್ ನ ರೋಮಿಯೋ ಮತ್ತು ಜ್ಯೂಲಿಯೆಟ್



* ಧ್ವನಿ

* ಸಾಹಿತ್ಯದಲ್ಲಿ ಸಬಾಲ್ಟರ್ನ್‌ರ ಪ್ರತಿನಿಧಿಕರಣ: ಮಹಾಶ್ವೇತಾದೇವಿಯ ಸ್ತನದಾಯಿನಿ



* ದಿ ಮಿಥ್ ಆಫ್ ಸಿಸಿಫಸ್

* ರೇಮಂಡ್ ವಿಲಿಯಮ್ಸ್‌ನ "The Analysis of Culture"ನ ವಿಶ್ಲೇಷಣೆ

# ಪ್ರತಿಸ್ಪಂದ

ಆಗಸ್ಟ್ 2013
ಸಂಪುಟ : 1    ಸಂಚಿಕೆ : 8



**ಸಂಪಾದಕರು:**
ಕೆ.ಆರ್. ಬಸವರಾಜು
ತೋಟದ ಮನೆ ನಂ: 107 (25)
ಕಂಬಾಘಟ್ಟ ಹೊಸ ಬಡಾವಣೆ
ತಿಪಟೂರು – 572201
ಮೊ : 9481492481, 9945521522
ಇ–ಮೇಲ್ : prathispandha@gmail.com

**ಮುದ್ರಕರು:**
ಟಿ.ಡಿ.ರಾಮು
ನಿಟ್ಟೂರು,
ಮೊ : 9880951125



**ಚಂದಾ ವಿವರ:**

| | |
|---|---|
| ಬಿಡಿ ಪ್ರತಿ | 10 ರೂ |
| ವಾರ್ಷಿಕ ಚಂದಾ | 120 ರೂ |
| ಸಂಸ್ಥೆಗಳಿಗೆ | 150 ರೂ |

ಚಂದಾ ಹಣವನ್ನು ಸಂಪಾದಕರ ವಿಳಾಸಕ್ಕೆ ನಗದು, ಎಂ.ಓ., ಅಥವಾ ಡಿ.ಡಿ. ಮೂಲಕ ಕಳುಹಿಸಬಹುದು.
ಚಂದಾಹಣವನ್ನು ಕಳುಹಿಸುವವರು ತಮ್ಮ ಅಂಚೆ ವಿಳಾಸವನ್ನು ಸ್ಪುಟವಾಗಿ ಬರೆಯಿರಿ.


**ಒಳಪುಟಗಳಲ್ಲಿ**





# ನಿಮ್ಮೊಂದಿಗೆ ....

*"At the end of a love,*
*Or a life, the poet says,*
*It is all perfectly clear."*

- Diana Bridge.

ಕಲ್ಪನೆಯು ಅನೇಕ ಆಯಾಮಗಳನ್ನು ಧ್ವನಿಸುತ್ತಿರುತ್ತದೆ. ಅದರ ಬಹುಮುಖ ಧ್ವನಿಗಳನ್ನು ಹಿಡಿದಿಡಲು ಕಾವ್ಯ ಶಕ್ತಿಯು ಶ್ರಮವಹಿಸಬೇಕಾಗುತ್ತದೆ. 'ಮಿಥ್' ಗಳು ಕಲ್ಪನೆಯನ್ನು ಉಸಿರಾಡುವ ಜೀವಗಳನ್ನು ಕಾಲಕಾಲಕ್ಕೆ ಅನುರೂಪವಾಗಿ ಪೋಷಿಸುತ್ತವೆ. ಹೋಮರ್ ನ ಸಿಸಿಫಸ್ ಪಾತ್ರ ಕಮುವಿನ ಅಸಂಗತ ನಾಯಕನಿಗೆ ಧ್ವನಿಯಾದಂತೆಯೇ ಅನ್ಯ ಸಂಸ್ಕೃತಿ/ಭಾಷೆಯು ಸ್ಥಳೀಯ ಸನ್ನಿವೇಶ/ಪಾತ್ರಗಳನ್ನು ಧ್ವನಿಸುವಾಗ ಅನೇಕ ಸ್ಥಿತ್ಯಂತರಗಳನ್ನು ಹಾದು ಹೋಗಬೇಕಾಗುತ್ತದೆ. ಮಹಾಶ್ವೇತಾದೇವಿ ಬರೆದಿರುವ ಸ್ತನದಾಯಿನಿ ಕತೆಯು ಮಾರ್ಕ್ಸ್‌ವಾದಿ ಮಹಿಳಾ ನೆಲೆಯಲ್ಲಿ ಅಥವಾ ಉದಾರವಾದಿ ಸ್ತ್ರೀವಾದದ ನೆಲೆಯಲ್ಲಿ ಹೇಗೆ ಧ್ವನಿಸಬಹುದು ಎಂಬುದನ್ನು ಗಾಯತ್ರಿ ಸ್ಪಿವಾಕ್ ಅಂತಹ ತೃತೀಯ ಜಗತ್ತಿನ ವಿಮರ್ಶಕರು ವಿಶ್ಲೇಷಿಸುತ್ತಿದ್ದಾರೆ.

ಭಾಷೆಯ ಪೊದೆಗಳನ್ನು ಅಲುಗಿಸಿ, ತೆರೆ ಸರಿಸಿದರೆ, ಕೆಲವು ಅಡ್ಡಿ ಆತಂಕಗಳನ್ನು ದಾಟಿದರೆ ಸಮುದ್ರದ ದರ್ಶನವಾದೀತು ಎನ್ನುವ ಡಯಾನಾ ಬ್ರಿಡ್ಜ್ ಅವರ ಕಾವ್ಯದ ಹುಡುಕಾಟವು ವಿಮರ್ಶೆಯ ಹಾದಿಯೂ ಆಗಬಾರದೇಕೆ? Whistle blowers ಮೇಲೆ ಹೆಚ್ಚುತ್ತಿರುವ ದಬ್ಬಾಳಿಕೆ, ಮಹಿಳೆಯರ ಮೇಲಿನ ದೌರ್ಜನ್ಯಗಳೂ ಸೇರಿದಂತೆ ಇಂದಿನ ಸಮಾಜದಲ್ಲಿ ಹೆಚ್ಚುತ್ತಿರುವ ಕ್ರೌರ್ಯ, ಹಿಂಸೆಗೆ ಕಾರಣಗಳಲ್ಲಿ ನಮಗನ್ನಿಸುವಂತೆ ಅಧಿಕಾರದಲ್ಲಿರುವವರನ್ನು ನಾವು ಪ್ರಶ್ನಿಸಿಕೊಳ್ಳುತ್ತಿರುವ ರೀತಿಗಳು ತಪ್ಪಿರಬಹುದು. ಇಂತಹ ಕ್ರೌರ್ಯಗಳನ್ನು ಪೋಷಿಸುತ್ತಿರುವ ಕಾಲದಲ್ಲಿ ಅನೇಕ ತರಹದ ಪ್ರಶ್ನಿಸುವ ಹತಾರಗಳು ನಮ್ಮ ಬಳಿ ಇಲ್ಲದೇ ಹೋದರೆ ಭಾಷೆಗೆ ಸೋಲಾಗುವುದು.

ತನ್ನ ಮೇಲೆ ನಡೆದ ಅತ್ಯಾಚಾರವನ್ನು, ನಾಲಿಗೆ ಸೀಳಿದ್ದರಿಂದ ಹೇಳಲಾಗದ ಮಾತುಗಳನ್ನು ಕೋಗಿಲೆಯಾಗಿಯಾದರೂ ಹಾಡುವ ಪೆಲೋಮಿನಾಳ ಕತೆ ಕೇಳಿದರೆ ಹಾಡಿನ ಶಕ್ತಿಯಷ್ಟೇ ಅಲ್ಲದೆ ಮಿಥ್ ಗಳ ಪ್ರಭಾವ ಗೋಚರವಾಗುತ್ತದೆ. ಸಿಸಿಫಸ್ ನ ನಡೆಯಾಗಲೀ, ದುಃಖಿತಳ ಹಾಡಾಗಲೀ ಭಾಷೆಯು ಕ್ರಿಯಾತ್ಮಕವಾಗಿರುವುದರ ಲಕ್ಷಣ. ಮಿಥ್ ಗಳು ಭಾಷೆಯ ಕ್ರಿಯಾ ಶಕ್ತಿಯನ್ನು ಮುಂದಿನ ಪೀಳಿಗೆಗೆ ತಲುಪಿಸುವ ಬೀಜಗಳು.

ವಂದನೆಗಳು.

– ಸಂಪಾದಕ



**ಪ್ರಸ್ತುತಿ**

# ವಿಲಿಯಂ ಷೇಕ್ಸ್‌ಪಿಯರ್ ನ 'ರೋಮಿಯೋ ಮತ್ತು ಜ್ಯೂಲಿಯೆಟ್'

ಹದಿನಾರನೇ ಶತಮಾನದ ವಿಲಿಯಂ ಶೇಕ್ಸ್‌ಪಿಯರ್ ಎಲ್ಲಾ ಕಾಲಕ್ಕೂ ಸಲ್ಲುವ ಪ್ರೀತಿ ಪ್ರೇಮದ ಆಳ ಅಗಲವನ್ನು ಮನೋಜ್ಞವಾಗಿ ಚಿತ್ರಿಸುವ ರೋಮಿಯೋ ಮತ್ತು ಜೂಲಿಯೆಟ್ ನಾಟಕವನ್ನು ರಚಿಸಿರುತ್ತಾನೆ. ಅಪರಿಚಿತರಾದ ವ್ಯಕ್ತಿಗಳಿಬ್ಬರು ಪರಿಚಿತರಾದಂದಿನಿಂದ ಪರಸ್ಪರ ಪ್ರೇಮಿಗಳಾಗಿ ತಮ್ಮ ಅಂತ್ಯದಲ್ಲಿ ಅಮರತ್ವವನ್ನು ಕಂಡುಕೊಳ್ಳುವುದೇ ನಾಟಕದ ವಸ್ತು. ಪ್ರೀತಿ ಎಂಬುದು ಎಲೆಯಮೇಲೆ ಬಿದ್ದ ಮಳೆಯ ಹನಿಯಂತೆ ಎಲೆಗೆ ಅಂಟಿಕೊಳ್ಳದೆ ಉರುಳಿ ಹೋಗುವ ನೀರಿನಂತಲ್ಲ. ಅದು ವ್ಯಕ್ತಿಗಳ ನರನಾಡಿಯಲ್ಲಿ ಸಂಚರಿಸುವ ರುದ್ರರಮ್ಯರಾಗ. ಪ್ರೇಮಿಗಳಿಬ್ಬರಲ್ಲಿ ಯಾರೊಬ್ಬರು ಮರಣಿಸಿದರೂ ಇನ್ನೊಬ್ಬರು ಬದುಕಲು ಸಾಧ್ಯವಿಲ್ಲ. ಹಾಗೆ ಬದುಕಿದ್ದೇ ಆದರೆ ಅದು ಪ್ರೀತಿ ಅಲ್ಲ. ಈ ಅರ್ಥದಲ್ಲಿ ರೋಮಿಯೋ ಜೂಲಿಯಟ್ ಅವರ ಪ್ರೇಮದ ಚೌಕಟ್ಟನ್ನು ಅರ್ಥೈಸಬಹುದು. ಆದರೆ ಈ ನೆಲೆ ಶೇಕ್ಸಪಿಯರ್ ನ ದುರಂತ ನಾಟಕದ ನಾಯಕರು ಮಾನವ ಸಹಜ ಲೋಪದಿಂದ ಅಥವಾ ಅಜ್ಞಾನದಿಂದ, ತಮ್ಮ ಬದುಕಿಗೇ ಅಂತ್ಯ ಹಾಡುವಂತಹ (Hamartia) ತೀರ್ಮಾನದಂತಹದ್ದು ಅಲ್ಲ.




ಕಥಾನಾಯಕಿ ಜೂಲಿಯೆಟ್ ರೋಮಿಯೋ ನೊಡನೆ ಮಾತನಾಡುವಾಗ ಅವಳ ವಯಸ್ಸಿನ್ನೂ ಕೇವಲ 14 ವರ್ಷ. ಈ ವಯಸ್ಸಿಗೆ ಮೀರಿದ ಅವಳ ಧೈರ್ಯ, ಸರಳತೆ, ಗಾಂಭೀರ್ಯಗಳು ಕುತೂಹಲ ಕೆರಳಿಸುತ್ತವೆ. ಆದರೆ ಜಗತ್ತಿನಲ್ಲಿ ಇವರಿಬ್ಬರೂ ಪ್ರೇಮದ ಪ್ರತೀಕಗಳಾಗಿ ಕಾಣುತ್ತಾರೆಯೇ ಹೊರತು ಅವಿವೇಕಿಗಳಾಗಿ ಅಲ್ಲ.

ಈ ನಾಟಕದ ದುರಂತಕ್ಕೆ ಕಾರಣವಾದ ಅಂತಿಮ ಶಕ್ತಿಯೆಂದರೆ ಅದು ವಿಧಿಯಾಟ ಎನ್ನಬಹುದು. ಒಂದು ದೃಷ್ಟಿಯಿಂದ ನೋಡಿದರೆ ಪರಸ್ಪರರನ್ನು ದ್ವೇಷಿಸುವ ಮನೆತನಗಳಿಗೆ ಸೇರಿದ ಯುವಕಯುವತಿಯರ ಪರಸ್ಪರ ಅನಿರೀಕ್ಷಿತ ಭೇಟಿಯಿಂದ ಉಂಟಾದ ಪ್ರೇಮ ದುರಂತದಲ್ಲಿ ಕೊನೆಯಾಗುವುದು ನಿರೀಕ್ಷಿತ.

ವೆರೋನಾ ನಗರದಲ್ಲಿ ಮಾಂಟೆಗ್ ಮತ್ತು ಕ್ಯಾಪುಲೆಟ್ ಎಂಬ ಮನೆತನಗಳೆರಡೂ ಪರಸ್ಪರರನ್ನು ದ್ವೇಷಿಸುತ್ತಿದ್ದವು. ಮನೆಯ ಸೇವಕರಿಂದ ಹಿಡಿದು ಆಡಳಿತದ ನೇತೃತ್ವ ವಹಿಸಿದ್ದ ಹಿರಿಯರವರೆಗೂ ಪರಸ್ಪರರಲ್ಲಿ ದ್ವೇಷದ ಕಿಚ್ಚು ಹೊತ್ತಿ ಉರಿಯುತ್ತಿತ್ತು. ಒಂದು ದಿನ ಕ್ಯಾಪುಲೆಟ್ ಕಡೆಯ ಸೇವಕರು ಬೀದಿಯಲ್ಲಿ ಸಂಚರಿಸುತ್ತಿದ್ದಾಗ ಮಾಂಟೆಗ್ ಮನೆತನದವರೊಂದಿಗೆ ಅನಿರೀಕ್ಷಿತ ಕಲಹ ಆರಂಭವಾಗಿತ್ತು. ಆಗ ಬೆನ್‌ವೋಲಿಯೋ (ಮಾಂಟೆಗ್ ಪಕ್ಷದವನು) ಬಂದು ಸಮಾಧಾನ ಮಾಡಲು ಯತ್ನಿಸಿ ವಿಫಲನಾದ ನಂತರ ಕ್ಯಾಪುಲೆಟ್ ಕಡೆಯ ಟೈಬಾಲ್ಟ್ ಬಂದು ಸಮಾಧಾನ ಮಾಡಿದಾಗಲೂ ಕಲಹ ಮುಂದುವರೆಯಲಾಗಿ ಕೊನೆಗೆ ಅವರ ಜಗಳವು ವೆರೋನಾದ ಪ್ರಭುಗಳವರೆಗೂ ಹೋಗಿ ನಿಂತಿತು. ಎರಡೂ ಕಡೆಯವರನ್ನು ಸಮಾಧಾನ ಪಡಿಸಿದ ರಾಜ ಮನಃ ಕಲಹ ಆರಂಭಿಸಿದ್ದೇ ಆದರೆ ಮರಣದಂಡನೆ ವಿಧಿಸುತ್ತೇನೆಂದು ಆಣತಿ ಇಟ್ಟನು.

ಮಾಂಟೆಗ್ ಮಗನಾದ ರೋಮಿಯೋ ಈಗಾಗಲೇ ರೋಸಲಿನ್ ಎಂಬ ಹುಡುಗಿಯನ್ನು ಪ್ರೀತಿಸುತ್ತಿದ್ದ. ಜೂಲಿಯೆಟ್ ಕ್ಯಾಪುಲೆಟ್ ಮನೆತನಕ್ಕೆ ಸೇರಿದವಳಾಗಿದ್ದು, ಕ್ಯಾಪುಲೆಟ್ ಮನೆಯಲ್ಲಿ ನಡೆಯುತ್ತಿದ್ದ ನೃತ್ಯಕ್ಕೆ ಜೂಲಿಯೆಟ್ ಬರುತ್ತಾಳೆಂದು ಸುದ್ದಿ ತಿಳಿದು ವೇಷ ಮರೆಸಿಕೊಂಡು ಅವಳ ನೃತ್ಯ ನೋಡಲು ರೋಮಿಯೋ ಹೋಗುತ್ತಾನೆ. ಜೂಲಿಯೆಟ್‌ಳನ್ನು ಪ್ಯಾರಿಸ್ ಎಂಬಾತ ಮದುವೆಯಾಗುವವನಿದ್ದನು. ಇದು ಅವಳ ತಂದೆ ತಾಯಿಗೆ ಪ್ರಿಯವಾದ ಸಂಬಂಧವಾಗಿತ್ತು. ರೋಮಿಯೋವಿನ ಧ್ವನಿಯನ್ನು ಗುರುತಿಸಿ ಜಗಳ ತೆಗೆಯಲು ತಯಾರಾಗಿದ್ದ ಸೇವಕನನ್ನು ಸಮಾಧಾನ ಪಡಿಸಿ ನೃತ್ಯದಲ್ಲಿ ಭಾಗವಹಿಸುತ್ತಾನೆ. ರೋಮಿಯೋ ಜೂಲಿಯಟ್

ಪರಸ್ಪರ ನೋಡಿದಾಕ್ಷಣ ಪ್ರೇಮದಲ್ಲಿ ಮುಳುಗುತ್ತಾರೆ.

ಆ ರಾತ್ರಿ ರೋಮಿಯೋ ಕ್ಯಾಪುಲೆಟ್ ಮನೆಯ ಕಾಂಪೌಂಡ್ ಹಾರಿ ಜೂಲಿಯಟ್ ಇದ್ದ ಕಿಟಕಿಯ ಬಳಿ ಸೇರುತ್ತಾನೆ. ಆಗ ಅವಳು, " ಅಯ್ಯೋ ರೋಮಿಯೋ ನೀನು ಯಾಕಾದರೂ ಮಾಂಟೆಗ್ಯೂ ಆದೆ, ಕ್ಯಾಪ್ಯುಲೆಟ್ ಆಗಬಾರದಿತ್ತ" ಎಂದು ಗೊಣಗುತ್ತಿದ್ದಳು. ಇದು ರೋಮಿಯೋ ಕಿವಿಗೆ ಬಿದ್ದಿತ್ತು. ಆ ನಂತರ ಮಾರನೆಯ ಬೆಳಗ್ಗೆ ತನ್ನ ಪ್ರೇಮವನ್ನು ಹೊರಗೆಡವುತ್ತಾನೆ. ನಂತರ ಪರಸ್ಪರರು ವಿವಾಹಕ್ಕೆ ಸಮ್ಮತಿಸಿ, ಪಾದ್ರಿ ಫ್ರೈಯರ್ ಲಾರೆನ್ಸ್ ಬಳಿಗೆ ಹೋಗಿ ತಮ್ಮ ಮದುವೆ ಮಾಡಿಸುವಂತೆ ಕೇಳಿಕೊಳ್ಳುತ್ತಾರೆ.

ಹೀಗೆ ಇವರ ಪ್ರೇಮ ಚಿಗುರುತ್ತಿರುವಾಗ ಒಮ್ಮೆ ರೋಮಿಯೋ ಬೀದಿಯೊಂದರಲ್ಲಿ ಸಂಚರಿಸುತ್ತಿದ್ದಾಗ ಮರ್ಕ್ಯುಷಿಯೋಗೂ, ಟೈಬಾಲ್ಟ್‌ಗೂ ಬಿರುಸಾದ ಮಾತುಕತೆ ನಡೆದಿತ್ತು. ರೋಮಿಯೋ ಅವರನ್ನು ಸಮಾಧಾನಪಡಿಸಲೆತ್ನಿಸಿದರೂ ಸಾಧ್ಯವಾಗಲಿಲ್ಲ. ಮರ್ಕ್ಯುಷಿಯೊ ಟೈಬಾಲ್ಟ್ ನಿಂದ ಹತನಾಗುತ್ತಾನೆ. ಆಗ ಅನಿವಾರ್ಯವಾಗಿ ಉಂಟಾದ ಕೋಪ–ತಾಪದಿಂದ ಟೈಬಾಲ್ಟ್‌ನನ್ನು ರೋಮಿಯೋ ಕೊಲ್ಲುತ್ತಾನೆ. ಈ ಅಪರಾಧದ ಕಾರಣದಿಂದಾಗಿ ರೋಮಿಯೋನನ್ನು ರಾಜ್ಯದಿಂದ ಗಡಿಪಾರು ಮಾಡಲಾಗುತ್ತದೆ. ಗಡಿಪಾರಾದ ರೋಮಿಯೋ ಮಾಂಟ್ಯಕ್ಕೆ ಹೋಗುವ ಮುನ್ನ ಇಡೀ ಸಂಜೆ ಜೂಲಿಯೆಟ್‌ಳೊಂದಿಗೆ ಕಳೆದು ಬೆಳಗ್ಗೆ ವೇಷ ಮರೆಸಿಕೊಂಡು ಮಾಂಟ್ಯಕ್ಕೆ ಹೊರಟು ಹೋದನು.

ಇತ್ತಕಡೆ ಜೋಲಿಯಟ್‌ಳ ಪ್ರೇಮವನ್ನು ಅರಿಯದ ಕ್ಯಾಪುಲೆಟ್ ಕಡೆಯವರು ಅವಳ ವಿವಾಹವನ್ನು ಪ್ಯಾರಿಸ್‌ನೊಂದಿಗೆ ಮಾಡಲು ನಿರ್ಧರಿಸಿರುತ್ತಾರೆ. ಆಗ ಜ್ಯೂಲಿಯೆಟ್, "ಪ್ಯಾರಿಸ್ ನೊಂದಿಗಿನ ವಿವಾಹ ತನಗೆ ಇಷ್ಟವಿಲ್ಲ. ನಾನು ಮದುವೆಯಾಗುವುದಾದರೆ ರೋಮಿಯೋನನ್ನೇ" ಎಂದು ಹಠ ಹಿಡಿಯುತ್ತಾಳೆ; ಅನಿವಾರ್ಯವೆಂಬಂತೆ ಫ್ರೈಯರ್ ಲಾರೆನ್ಸ್ ಸಹಾಯ ಯಾಚಿಸುತ್ತಾಳೆ. ಆಗ ಪಾದ್ರಿಯು ಸರಳವಾದ ಆದರೆ ಉತ್ತಮವಾದ ಸಲಹೆಯನ್ನು ನೀಡುತ್ತಾನೆ. ಲಾರೆನ್ಸ್ ಜ್ಯೂಲಿಯೆಟ್‌ಗೆ ಔಷಧಿಯೊಂದನ್ನು ನೀಡುತ್ತಾನೆ. ಆಕೆಗೆ, "ಇದನ್ನು ಸೇವಿಸುತ್ತಲೇ ನೀನು ಸತ್ತಂತೆ ಬೀಳುತ್ತಿಯ, ಆಗ ನೀನು ಸತ್ತಿದ್ದೀಯೆಂದು ತಿಳಿದು ನಿನ್ನನ್ನು ನಿನ್ನ ಪೋಷಕರು ಸಮಾಧಿಮಾಡುತ್ತಾರೆ. ನಾನು ರೋಮಿಯೋಗೆ ಕಾಗದ ಬರೆದು ತಿಳಿಸುತ್ತೇನೆ. ನೀನು ಎಚ್ಚರಗೊಳ್ಳುವ ವೇಳೆಗೆ ರೋಮಿಯೋ ಬಂದು ನಿನ್ನನ್ನು ಮಾಂಟ್ಯಗೆ ಕರೆದು ಒಯ್ಯುತ್ತಾನೆ" ಎಂದು ಹೇಳುತ್ತಾನೆ. ಪ್ಯಾರಿಸ್ ನೊಂದಿಗೆ ಇನ್ನೇನು ವಿವಾಹ ನಡೆಯಬೇಕು ಎನ್ನುವ ಹೊತ್ತಿಗೆ ಜ್ಯೂಲಿಯೆಟ್ ಪಾದ್ರಿ ಹೇಳಿದಂತೆ ಮಾಡುತ್ತಾಳೆ.

ಆದರೆ ವಿಧಿಯಾಟ ಬೇರೆಯದೇ ಆಗಿತ್ತು. ಫ್ರೈಯರ್ ಲಾರೆನ್ಸ್ ಬರೆದ ಕಾಗದ ರೋಮಿಯೋವನ್ನು ತಲುಪಲಿಲ್ಲ. ಜ್ಯೂಲಿಯೆಟ್ ಸತ್ತಳೆಂದು ಬೇರೆಯವರಿಂದ ತಿಳಿದ ರೋಮಿಯೋ ಅವಳ ಸಮಾಧಿಯೆಡೆಗೆ ಧಾವಿಸಿ ಬರುತ್ತಾನೆ. ಜ್ಯೂಲಿಯಟ್ ಇಲ್ಲದ ಜೀವನ ಶೂನ್ಯವೆಂದು ಭಾವಿಸಿ ಅವಳ ಸಮಾದಿಯನ್ನು ತರೆಯುತ್ತಿದ್ದಾಗ, ಪ್ಯಾರಿಸ್ ಅವಳ ಸಮಾಧಿಯ ಬಳಿ ಹೂಗಳನ್ನಿಡಲು ಬರುತ್ತಾನೆ. ಸತ್ತವಳಿಗೆ ಅವಮಾನ ಮಾಡುತ್ತಿದ್ದಾನೆಂದು ಭಾವಿಸಿ ರೋಮಿಯೋನೊಂದಿಗೆ ಘರ್ಷಣೆಗೆ ಇಳಿಯುತ್ತಾನೆ. ಇಬ್ಬರ ಹೋರಾಟದಲ್ಲಿ ಪ್ಯಾರಿಸ್ ಸಾಯುವಾಗ ತನ್ನ ಶವವನ್ನು ಜ್ಯೂಲಿಯೆಟ್ ಸಮಾಧಿಯ ಬಳಿ ತನ್ನ ಶವವನ್ನು ಇಡುವಂತೆ ಕೇಳಿಕೊಳ್ಳುತ್ತಾನೆ. ರೋಮಿಯೋ ಅವನ ಆಸೆಯನ್ನು ತೀರಿಸಿ ತಾನು ಬದುಕಲಾರದೆ ವಿಷ ಕುಡಿದು ಸಾಯುತ್ತಾನೆ.

ವಿಷಯ ತಿಳಿದು ಫ್ರೈಯರ್ ಲಾರೆನ್ಸ್ ಬರುವ ವೇಳೆಗೆ ಅನಾಹುತ ಸಂಭವಿಸಿ ಹೋಗಿರುತ್ತದೆ. ನಂತರ ಜ್ಯೂಲಿಯೆಟ್ ಎಚ್ಚರಗೊಂಡಾಗ ನಡೆದ ಪ್ರಸಂಗವನ್ನು ವಿವರಿಸಿದರೂ ರೋಮಿಯೋವನ್ನು ಬಿಟ್ಟು ಬದುಕಿರಲಾರದೆ ಅವನ ಚಾಕುವಿನಿಂದ ಇರಿದುಕೊಂಡು ಪ್ರಾಣ ಬಿಡುತ್ತಾಳೆ. ಲಾರೆನ್ಸ್ ನಿಂದ ವಿಷಯ ತಿಳಿದ ನಂತರ ಕ್ಯಾಪುಲೈಟ್ ಮತ್ತು ಮಾಂಟೆಗ್ ಎರಡೂ ಕಡೆಯವರು ತಮ್ಮ ಪರಸ್ಪರ ದ್ವೇಷದಿಂದ ತಮ್ಮ ಮಕ್ಕಳಿಗೆ ಈ ದುರ್ಗತಿ ಬಂದೊದಗಿತೆಂದು ತಮ್ಮ ದ್ವೇಷವನ್ನು ಕೊನೆಗಾಣಿಸುತ್ತಾರೆ.

–ಮಹೇಶ್ ಕೆ.ಎಸ್.
ಸಮಾಜಶಾಸ್ತ್ರ ಸ್ನಾತಕೋತ್ತರ ವಿದ್ಯಾರ್ಥಿ
ತುಮಕೂರು ವಿಶ್ವ ವಿದ್ಯಾಲಯ

## ಪಥ್ಯ ಓದು — ದಿ ಮಿಥ್ ಆಫ್ ಸಿಸಿಫಸ್

ಬೆಟ್ಟದ ಮೇಲಿಂದ ಉರುಳುವ ಬಂಡೆಯನ್ನು ಮತ್ತೆ ಮತ್ತೆ ಬೆಟ್ಟದ ಮೇಲಕ್ಕೆ ಒಯ್ಯುವಂತೆ ದೇವತೆಗಳು ಸಿಸಿಫಸ್ ನನ್ನು ಶಪಿಸಿದ್ದಾರೆ. ಅವರ ವಿವೇಚನೆಯಲ್ಲಿ ನಿರರ್ಥಕವಾದ ಮತ್ತು ಭರವಸೆಯಿಲ್ಲದ ಶ್ರಮಕ್ಕಿಂತ ಘೋರವಾದ ಶಿಕ್ಷೆ ಬೇರಾವುದೂ ಇಲ್ಲ.



ಹೋಮರ್ ಹೇಳುವ ಮಾತುಗಳನ್ನು ನಂಬುವುದಾದರೆ, ಮರ್ತ್ಯರಲ್ಲಿ ಸಿಸಿಫಸ್ ನಷ್ಟು ವಿವೇಕಿಗಳಾದವರು ಯಾರೂ ಇಲ್ಲ. ಮತ್ತೊಂದು ನಂಬಿಕೆಯ ಪ್ರಕಾರ ದೇವತೆಗಳೇ ಈತನಿಗೆ ಸುಲಿಗೆಕೋರನ ಕೆಲಸ ಮಾಡುವಂತೆ ಪ್ರೇರೇಪಿಸಿರುತ್ತಾರೆ. ಈತ ನರಕದ ನಿರರ್ಥಕ ಶ್ರಮಿಕ ಏಕಾದನೋ ಎಂಬುದಕ್ಕೆ ಭಿನ್ನ ಭಿನ್ನ ಅಭಿಪ್ರಾಯಗಳಿವೆ. ಮೊದಲನೆಯದಾಗಿ ದೇವರುಗಳ ಬಗ್ಗೆ ಹಗುರವಾಗಿ ನಡೆದುಕೊಳ್ಳುವವನು ಎಂಬ ಆರೋಪ ಇವನ ಮೇಲಿದೆ; ಅಲ್ಲದೆ ರಹಸ್ಯಗಳನ್ನು ಕದಿಯುವುದು ಇವನ ಚಾಳಿ. Aesopus ನ ಮಗಳು Aegina ಳನ್ನು ಜ್ಯೂಪಿಟರ್ ಹೊತ್ಯೊಯುತ್ತಾನೆ. ಅಪ್ಪನಿಗೆ ಮಗಳು ಕಾಣೆಯಾಗಿರುವುದರಿಂದ ಆಘಾತವಾಗಿದೆ. ಸಿಸಿಫಸ್ ಗೆ ದೂರು ಹೋಗಿದೆ. ಈ ವಿಷಯದ ಬಗ್ಗೆ ಪೂರ್ಣ ಮಾಹಿತಿ ಹೊಂದಿರುವ ಸಿಸಿಫಸ್ ಕಾರಿಂಥ್ ಕೋಟೆಗೆ ನೀರು ಬಿಡಬೇಕೆಂಬ ಷರತ್ತಿನೊಂದಿಗೆ Aesopus ಗೆ ಮಾಹಿತಿ ನೀಡುತ್ತಾನೆ.

ಸ್ವರ್ಗೀಯ ಬರಸಿಡಿಲಿಗೆ ಬದಲಾಗಿ ಆತ ನೀರಿನ ಅನುಗ್ರಹವನ್ನು ಇಷ್ಟಪಟ್ಟ, ಇದರಿಂದ ನರಕದಲ್ಲಿ ಅವನಿಗೆ ಶಿಕ್ಷೆಯಾಯಿತು. ಹೋಮರ್ ಹೇಳುವ ಪ್ರಕಾರ ಸಿಸಿಫಸ್ ಸಾವಿಗೇ ಬೇಡಿ ತೊಡಿಸಿದವನು. ಸಾವಿನ ಅಧಿಪತಿಯಾದ ಪ್ಲೂಟೋಗೆ ತನ್ನ ಸಾಮ್ರಾಜ್ಯ ಸಾವಿನ ದೇವತೆಯಿಲ್ಲದೆ ಬಿಕೋ ಎನ್ನುವುದನ್ನು ನೋಡಲಾರದೆ ಯುದ್ಧದ ದೇವತೆಯ ಸಹಾಯದಿಂದ ಸಾವನ್ನು ಬಿಡಿಸಿಕೊಂಡು ಬರುತ್ತಾನೆ.

ಮತ್ತೂ ಒಂದು ಕತೆಯ ಪ್ರಕಾರ, ಸಾಯುವ ಕೊನೆ ಗಳಿಗೆಯಲ್ಲಿ ಸಿಸಿಫಸ್ ಗೆ ತನ್ನ ಹೆಂಡತಿಯ ಪ್ರೀತಿಯನ್ನು ಪರೀಕ್ಷಿಸಬೇಕೆಂಬ ಆಸೆಯಾಗುತ್ತದೆ. ತಾನು ಸತ್ತ ಮೇಲೆ ತನ್ನ ಹೆಣವನ್ನು ಜನಸಂದಣಿಯ ಚೌಕದಲ್ಲಿ ಚೆಲ್ಲುವಂತೆ ಅವಳಿಗೆ ಆಜ್ಞಾಪಿಸುತ್ತಾನೆ. ಸಾಯುತ್ತಲೇ ನರಕ ಸೇರುವ ಸಿಸಿಫಸ್‌ನಿಗೆ ಸಾಯುವಾಗ ಮಾನವ ಪ್ರೀತಿಗೆ ವ್ಯತಿರಿಕ್ತ ವಾಗಿ ನಡೆದುಕೊಂಡಿದ್ದ ರಿಂದ, ತನ್ನ ಹೆಂಡತಿಯನ್ನು ದಂಡಿಸುವ ಸಲುವಾಗಿ ಪ್ಲೂಟೋವಿನಿಂದ ಅನುಮತಿ ಪಡೆದು ಮತ್ತೆ ಭೂಮಿಗೆ ಮರಳುತ್ತಾನೆ.

ಭೂಮಿಯ ನೀರು, ಸೂರ್ಯ, ಬೆಚ್ಚನೆಯ ಕಲ್ಲುಗಳು, ಸಮುದ್ರದ ಮುಖ ನೋಡುತ್ತಿದ್ದಂತೆಯೇ ಆ ನರಕದ ಬಾಗಿಲಿಗೆ ಮತ್ತೆ ಹೋಗಬಾರದೆಂದು ಅನಿಸುತ್ತದೆ. ನರಕದಿಂದ ಬರುವ ಯಾವ ಕರೆಗೂ ಆತ ಉತ್ತರಿಸಲಾರ. ಎಷ್ಟೋ ವರ್ಷಗಳ ಕಾಲ, ಸಮುದ್ರದ ಚಾಚಿಗೆ ಮುಖ ಮಾಡಿ, ಹೊಳೆಯುವ ಸಮುದ್ರ, ನಗುವ ಭೂಮಿಯ ಸವಿಯನ್ನು ಅನುಭವಿಸುತ್ತಾ ಕಾಲ ಕಳೆಯುತ್ತಾನೆ. ದೇವತೆಗಳಿಗೆ ಇವನ ನಡವಳಿಕೆ ಉದ್ಧಟವೆನ್ನಿಸುತ್ತದೆ. ಅವನ ಕೊರಳ ಪಟ್ಟಿ ಹಿಡಿದು ಬಲವಂತವಾಗಿ ಸೆಳೆದೊಯ್ದು ನರಕಕ್ಕೆ ದೂಡುತ್ತಾರೆ. ಅವನ ಸರ್ವಸುಖವನ್ನೂ ಕಿತ್ತುಕೊಂಡು ಬಂಡೆಕಲ್ಲನ್ನು ನೂಕಾಡಲು ನಿಯಮಿಸಿದ್ದಾರೆ.

ನಿಮಗೀಗಾಗಲೇ ಅನ್ನಿಸಿರಬಹುದು ಸಿಸಿಫಸ್ ಒಬ್ಬ ಅಸಂಗತ ನಾಯಕನೆಂದು. ಈತ ತನ್ನ ಕ್ರೂರ ಯಾತನೆಗಳನ್ನು ಹೊಕ್ಕಂತೆಯೇ ತನ್ನ ತೀವ್ರ ಭಾವಾತಿರೇಕಗಳನ್ನೂ ಅನುಭವಿಸುವವನು. ದೇವತೆಗಳ

ಬಗ್ಗೆ ತಿರಸ್ಕಾರ, ಸಾವಿನ ಕುರಿತಂತೆ ದ್ವೇಷ, ಬದುಕಿನ ತೀವ್ರ ಹಂಬಲದಿಂದ ಮಾತಿಗೆ ನಿಲುಕಲಾರದ ಶಿಕ್ಷೆಗೆ ಗುರಿಯಾಗಿದ್ದಾನೆ. ಅವನ ಇಡೀ ಅಸ್ತಿತ್ವ ಏನನ್ನೂ ಸಾಧಿಸಲಾರದ ಎಡೆಗೆ ಸೆಳೆದಿದೆ. ಈ ಪ್ರಪಂಚದ ಭಾವೋದ್ರೇಕಗಳಿಗೆ ಆ ಬೆಲೆಯನ್ನು ಆತ ತೆರಲೇ ಬೇಕು. ನರಕದಲ್ಲಿ ಸಿಸಿಫಸ್ ಹೇಗಿದ್ದ ಎಂಬುದನ್ನು ಎಲ್ಲಿಯೂ ಹೇಳಿಲ್ಲ. ಕಲ್ಪನೆಗಳು ಪುರಾಣಗಳಾಗಿ ಸೃಷ್ಟಿಯಾಗಿರುವುದೇ ಅವುಗಳ ಒಳಗೆ ಜೀವ ಉಸಿರಾಡಲಿ ಎಂದು.

ತನ್ನ ಇಡೀ ಬಲವನ್ನು ಉಪಯೋಗಿಸಿ ಮೇಲಕ್ಕೇರಿಸಿದ ಬಂಡೆ ಆತ ನೋಡ ನೋಡುತ್ತಿದಂತೆಯೇ ಕೆಳಕ್ಕೆ ಧಾವಿಸಿ ಬೀಳುತ್ತದೆ. ಮತ್ತೆ ಕೆಳಕ್ಕಿಳಿದು ಅದನ್ನು ಮೇಲಕ್ಕೆ ತಳ್ಳುವುದು ಸಿಸಿಫಸ್ ನ ಪಾಲಿನ ಶಿಕ್ಷೆ.

ಆತ ಕೆಳಗಿಳಿದು ಬರುವ ಕ್ಷಣದಲ್ಲಿ ನನ್ನ ಕುತೂಹಲವನ್ನು ಕೆರಳಿಸುತ್ತಾನೆ. ಬಂಡೆಯ ಜೊತೆ ಆಡಿ ಆಡಿ ಅವನ ಮುಖ ಬಂಡೆಯಂತೆಯೇ ಆಗಿದೆ. ಈ ಸಂಕಟ ಯಾವತ್ತು ಮುಗಿಯುತ್ತದೆಯೋ ಎಂಬುದೇ ತಿಳಿಯದೆ ಭಾರವಾಗಿದೆ. ಆದರೆ ಬೆಟ್ಟದಿಂದ ಇಳಿಯುವಾಗಿನ ಕ್ಷಣ ಅವನ ಉಸಿರು ನಿರಾಳವಾಗುವ ಕ್ಷಣ. ಈ ಕ್ಷಣವೇ ನನ್ನ ಪ್ರಕಾರ ಪ್ರಜ್ಞಾ–ಚೇತನದ ಜಾಗೃತಿಯ ಘಟ್ಟ. ಆ ಕ್ಷಣದಲ್ಲಿ ಆತ ತನ್ನನ್ನು ಸದಾ ಮಣಿಸುವ ವಿಧಿಗಿಂತ ಎತ್ತರದಲ್ಲಿದ್ದಾನೆ. ಬಂಡೆಗಿಂತ ಗಟ್ಟಿಯಾಗಿದ್ದಾನೆ.

ಈ ಮಿಥ್ ದುರಂತವಾಗಿರುವುದಕ್ಕೆ ಕಾರಣ ನಾಯಕನಿಗೆ ತನ್ನ ಸಂಕಟದ ಬಗ್ಗೆ ಜಾಗೃತಿಯಿದೆ. ಭರವಸೆಯ ಕ್ಷಣಗಳಿದ್ದರೆ ಈ ವೇದನೆಯೆಲ್ಲಿರುತ್ತಿತ್ತು? ದಿನಾ ದಿನಾ ಕೆಲಸ ಮಾಡುವ ಶ್ರಮಜೀವಿ ಅದೇ ಏಕತಾನದ ಕೆಲಸಗಳಲ್ಲಿ ತೊಡಗಿರುವವನ ವಿಧಿ ಸಿಸಿಫಸ್ ಸ್ಥಿತಿಯಂತೆಯೇ ಅಸಂಗತ. ಆದರೆ ಈ ಅರಿವು ಬರುವ ಅಪರೂಪದ ಕ್ಷಣಗಳಲ್ಲಿ ಮಾತ್ರವೇ ಅದು ದುರಂತವಾಗುತ್ತದೆ.

ದೇವರುಗಳಿಗಾಗಿ ಜೀತ ಮಾಡುವ ಕೂಲಿಕಾರ ಸಿಸಫಸ್, ಅಧಿಕಾರಹೀನ ಮತ್ತು ಪ್ರತಿಭಟಿಸುವ ಧೋರಣೆ ಉಳ್ಳವನು; ತನ್ನ ದರಿದ್ರ ಸ್ಥಿತಿಯ ಆಳ ಅಗಲವನ್ನು ಬಲ್ಲವನು. ಕೆಳಗೆ ಇಳಿಯುವಾಗ ಆತ ಇದನ್ನೇ ಯೋಚಿಸುತ್ತಿರುತ್ತಾನೆ. ಅವನ ಭೀಕರ ಯಾತನೆಯನ್ನು ನಿಯೋಜಿಸಿರುವ ಬೆಳಕೇ ಅವನ ಜಯಕ್ಕೆ ಕಿರೀಟಪ್ರಾಯವಾಗಿದೆ. ತಿರಸ್ಕಾರದಿಂದ ಗೆಲ್ಲಲಾಗದ ಯಾವ ವಿಧಿಯೂ ಇಲ್ಲ.

ಕೆಳಮುಖ ಇಳಿಯುವಿಕೆಯು ಕೆಲವೊಮ್ಮೆ ದುಃಖಕ್ಕೆ ಕಾರಣವಾದರೆ, ಇದೇ ಸ್ಥಿತಿಯು ಖುಷಿಯನ್ನೂ ನೀಡಿದ ಉದಾಹರಣೆಗಳಿವೆ. ಬಂಡೆಯನ್ನು ಮೇಲಕ್ಕೆ ಎತ್ತುವಾಗ ಮನಸ್ಸಿನಲ್ಲಿ ತೀವ್ರವಾದ ಬೇಜಾರು ಕಾಡುತ್ತದೆ. ಇದು ಬಂಡೆಗೆ ದೊರೆತ ಜಯ, ಬಂಡೆಯಂತೆಯೇ ಕಠಿಣ. ಸೀಮಾತೀತವಾದ ಸಂಕಟವನ್ನು ಹೊರುವುದು ತುಂಬಾ ಭಾರ. ಆದರೆ ಸತ್ಯವನ್ನು/ವಾಸ್ತವವನ್ನು ಒಪ್ಪಿಕೊಳ್ಳುತ್ತಲೇ ನಮ್ಮ ಕುಸಿತವನ್ನು ತಡೆಯಬಹುದು. ಮೇಲ್ನೋಟಕ್ಕೆ ಈಡಿಪಸ್ ತನ್ನ ವಿಧಿಯನ್ನು ಒಪ್ಪಿಕೊಂಡಿದ್ದಾನೆ. ಆದರೆ ಆ ವಿಧಿಯ ಸತ್ಯ ತಿಳಿಯುತ್ತಲೇ ಅವನ ದುರಂತ ಶುರುವಾಗುತ್ತದೆ. ಅಂತ್ಯದಲ್ಲಿ ಕುರುಡನಾಗಿ, ಅಸಹಾಯಕನಾಗಿ ನಿಂತ ಈಡಿಪಸ್‌ಗೆ ಗೊತ್ತಿದೆ ತನ್ನನ್ನು ಈ ಪ್ರಪಂಚಕ್ಕೆ ಜೋಡಿಸಿರುವುದು, ತನಗೆ ಆಸರೆ ನೀಡಿರುವ ಪುಟ್ಟ ಹುಡುಗಿಯ ತಣ್ಣನೆಯ ಕೈ ಮಾತ್ರವೇ ಎಂದು. ತಕ್ಷಣವೇ ಆತನ ಬಾಯಿಂದ ಸಿಡಿಲಿನಂತಹ ಈ ವಾಕ್ಯಗಳು ಕೇಳಿ ಬರುತ್ತವೆ, "ಈ ಎಲ್ಲಾ ವಿಷಮ ಪರೀಕ್ಷೆಗಳು, ದುರ್ಬಲವಾಗುತ್ತಿರುವ ನನ್ನ ವಯಸ್ಸು, ಘನತೆಯನ್ನು ಕಾಯ್ದುಕೊಂಡಿರುವ ನನ್ನ ಆತ್ಮ, ಸಾರಿ ಹೇಳುತ್ತಿವೆ ಎಲ್ಲವೂ ಸರಿಯಾಗಿದೆ ಎಂದು". ಸಾಫೊಕ್ಲಿಸ್ ನ ಈಡಿಪಸ್. ದಾಸ್ತೊವೆಸ್ಕಿಯ ಕಿರಿಲೋವ್ ಅಸಂಗತವಾದದ್ದು ಜಯಿಸುತ್ತದೆ ಎಂಬುದಕ್ಕೆ ಸಾಕ್ಷಿಯಾಗಿದ್ದಾರೆ. Ancient Wisdom confirms modern heroism.

ಆಲ್ಬರ್ಟ್ ಕಮು ಅಸಂಗತ ಬರಹಗಾರ. ಅವನ ಪ್ರಕಾರ ನಮ್ಮ ಜೀವನಕ್ಕೆ ಅರ್ಥ ಕೊಡಲು ದೇವರುಗಳು ಇಲ್ಲದಿದ್ದರೆ, ಆ ಅರ್ಥವನ್ನು ಕೊಟ್ಟುಕೊಳ್ಳಲು ನಾವೇ ಜವಾಬ್ದಾರರಾಗಬೇಕಾಗುತ್ತದೆ. ಪುರಾಣ ಪಾತ್ರ ಸಿಸಿಫಸ್ ತರಹ. ಸಾಹಿತ್ಯದ ಪಠ್ಯಗಳನ್ನು ಓದಲು ಮಿಥ್ ಗಳು ಸಹಾಯ ಮಾಡುತ್ತವೆ. ಈ ಪುರಾಣಗಳು ಕಟ್ಟಿಕೊಡುವ ಕಲ್ಪನೆ ಸಾಹಿತ್ಯದ ಪಠ್ಯಕ್ಕೆ, ನಾಯಕ/ನಾಯಕಿಯರ ನಡವಳಿಕೆಗೆ ಹೊಸ ಅರ್ಥಗಳನ್ನು ಕಟ್ಟಿಕೊಡುತ್ತವೆ.

---

ಆಧಾರ: **Albert Camus - The Myth of Sisypus**

| ಸಾಹಿತ್ಯ ಶೈಲಿ/ ರೂಪ |  | ಧ್ವನಿ |  |
|---|---|---|---|

ಪದ್ಯದ ಅರ್ಥ ನಿರ್ಮಾಣದ ಹಾದಿಯಲ್ಲಿ, ಪದ್ಯದ ಧ್ವನಿ, ಅಂದರೆ ಓದುಗನಿಗೂ ಪದ್ಯವನ್ನು ಮಾತನಾಡುತ್ತಿರುವವನಿಗೂ ಇರುವ ದೂರ (Vantage Point) ಇವುಗಳ ಕೊಡುಗೆ ಅಪಾರ. ಇವು ಪದ್ಯದ ಸಂದರ್ಭದಲ್ಲಿರುವ ಅಂಶಗಳಾಗಿದ್ದು, ಪದ್ಯದ ಪದಗಳ ಹಾಗು ಪದ್ಯದ ರಚನೆಯ ಅರ್ಥಗಳನ್ನು ವೃದ್ಧಿಸುತ್ತವೆ. ಪದ್ಯಗಳನ್ನು ಓದುವುದಕ್ಕಿಂತ ಕೇಳುವುದು ಬಹಳ ಮುಖ್ಯ. ಪದ್ಯವನ್ನು ಮಾತನಾಡುವವನ ಧ್ವನಿಯನ್ನು ಗುರುತಿಸಿ, ಆ ಧ್ವನಿಯ ಸ್ವರೂಪವನ್ನು ತಿಳಿದುಕೊಳ್ಳುವುದು ಕೂಡ ಪ್ರಮುಖವಾಗುತ್ತದೆ.

ಹಲವಾರು ಪದ್ಯಗಳಲ್ಲಿ ಬರುವ 'ನಾನು' ಅಥವ "I" ಗಳ ವ್ಯಕ್ತಿತ್ವವನ್ನು ಗುರುತಿಸುವುದು ಅಷ್ಟೇನೂ ಸುಲಭದ ಕೆಲಸವಲ್ಲ. ಸಹಜವಾಗಿ ನಾವು 'ನಾನು' ಗಳನ್ನು ಕವಿಯೊಂದಿಗೆ ಗುರುತಿಸುತ್ತೇವೆ. ಇತ್ತೀಚಿನ ದಿನಗಳಲ್ಲಿ ಎಲ್ಲ ಪದ್ಯಗಳನ್ನು 'Dramatic' ಆಗಿಂಯೇ ಗುರುತಿಸುವುದರಿಂದ ಪದಗಳಲ್ಲಿ ಬರುವ 'ನಾನು' ಅಥವ 'I'ಗಳನ್ನು ಕವಿಯೊಂದಿಗೆ ಗುರುತಿಸ ಬಾರದೆಂದು ಇತ್ತೀಚಿನ ವಿಶ್ಲೇಷಣಾ ನೆಲೆಗಳು ಸಲಹೆ ನೀಡುತ್ತವೆ. ಜೀವನ ವೃತ್ತಾಂತಗಳ ವಿವರಗಳನ್ನು ಅರ್ಥ ನಿರ್ಮಾಣಕ್ಕೆ ತಪ್ಪಾಗಿ ಬಳಸದಿರುವುದು ಇಂಥ ಸಲಹೆಯ ಪಾಲನೆಯಿಂದ ಆಗುತ್ತದೆ. ಪದ್ಯಗಳಲ್ಲಿರುವ 'ನಾನು' ಗಳನ್ನು ಕವಿಯೊಂದಿಗೆ ಗುರುತಿಸುವುದ ರಿಂದ ಪದ್ಯಗಳನ್ನು ವಸ್ತುನಿಷ್ಠವಾದ ಅಧ್ಯಯನ ಮಾಡಲಾಗುವುದಿಲ್ಲ. ಹಾಗೆಂದು, ಕೆಲವು ಪದ್ಯಗಳನ್ನು ಜೀವನ ವೃತ್ತಾಂತ ವಿವರಗಳನ್ನು ಬಿಟ್ಟು ಅಧ್ಯಯನ ಮಾಡುವುದೂ ಕೂಡ ಹಾಸ್ಯಸ್ಪದವಾಗುತ್ತದೆ. ಉದಾಹರಣೆಗೆ Milton ಕವಿಯ 'On His Blindness' ಕವಿತೆಯನ್ನು ತೆಗೆದುಕೊಳ್ಳೋಣ. ಪದ್ಯದ ಶೀರ್ಷಿಕೆಯನ್ನು ಬಿಟ್ಟು ಪದ್ಯದ ಯಾವಸಾಲಿನಲ್ಲಿಯೂ ಕವಿಯು ಕುರುಡಾಗಿದ್ದಾನೆನ್ನುವ ಉಲ್ಲೇಖವಿಲ್ಲ . ಬರಿದೆ, 'My light is spent', The dark World', 'light denied', ಇಂಥಹ ಶಬ್ದಗಳು, ವಾಕ್ಯ ಭಾಗಗಳನ್ನು ಈ ಪದ್ಯದಲ್ಲಿ ನೋಡುತ್ತೇವೆ. ಇವುಗಳನ್ನು ನಾವು ಕವಿಯ ಸೆರೆವಾಸ, ಅಥವಾ ಬಂಧನ, ಚರ್ಚಿನಿಂದ ಬಹಿಷ್ಕರಿಸು ಎಂದೆಲ್ಲಾ ಊಹಿಸುವಂತಿಲ್ಲ. ಈ ಪದ್ಯದಲ್ಲಿರುವ ವಸ್ತುಗಳನ್ನೆಲ್ಲಾ, ವಾಕ್ಯಗಳನ್ನೆಲ್ಲಾ, ಮನಸೋ ಇಚ್ಛೆ ಸಂಕೇತಗಳನ್ನಾಗಿಸುವಂತಿಲ್ಲ. ಈ ಕವಿತೆಯ ಸಾರಾಂಶ ಕವಿಯ ಜೀವನ ವೃತ್ತಾಂತದ ಒಂದು ಅಧ್ಯಾಯ, ಎನ್ನುವ ಪದ್ಯದ ಅರ್ಥ, ಹೆಚ್ಚು ವಿವೇಚನಾಯುಕ್ತವಾದದ್ದು ಹಾಗು ತರ್ಕಬದ್ಧ ವಾದುದಾಗುತ್ತದೆ.

'Mathew Arnold ನ ಕವಿತೆ 'Philomela' ದಲ್ಲಿ ಪದ್ಯದಲ್ಲಿರುವ ಧ್ವನಿಗಳ ಸ್ವರೂಪ, ಹಾಗೂ ಗುರುತನ್ನು ಪತ್ತೆಹಚ್ಚುವುದು ಅರ್ಥ ನಿರ್ಮಾಣಕ್ಕೆ ಎಷ್ಟು ಮುಖ್ಯ ಎನ್ನುವುದನ್ನು ನೋಡೋಣ.

Philomela
Hark ! ah, the nightingale
The tawny throated !
Hark, from the moon lit cedar what a burst !
What triumph ! hark ! what pain !
O wanderer from a Grecian shore,
Still, after many years, in distant lands,
Still nourishing in thy bewildered brain
That wild, quenched deep sunken, old world pain
Say, will it never heal ?
And can this fragrant lawn
With its cool trees, and night,
And the sweer, tranquil Thames,

And moonshine, and the dew,
To thy rack'd heart and brain
Afford no balm?
Dost thou to-night behold,
Here, through the moonlight on this English grass,
The unfriendly palace in the Thracian wild?
Dost thou again peruse
With hot cheeks and seared eyes
The too clear web, and thy dumb sister's shame?
Dost thou once more assay
Thy flight, and feel come over thee
Poor fugitive, the feathery change
Once more, and once more seem to make resound
With love and hate, triumph and agony.
one Daulis, and the high cephissian vale?
Listen, Eugenia
How thick the bursts come crowding through the leaves!
Again thou hearest?
Eternal passion!
Eternal Pain!

****

ಕೇಳು ! ಅಹ್, ಈ ಕೋಗಿಲೆ
ಸುಂದರ ಸ್ವರದ ಈ ಹಕ್ಕಿ
ನೋಡಲ್ಲಿ ! ಚಂದ್ರನ ಬೆಳಕಿನಲ್ಲಿ ಮುಳುಗಿರುವ
ಸಿಡಾರ್ ಕಾಡುಗಳಿಂದ ಎಂಥ ಬಿರಿತ
ಎಂಥ ಗೆಲುವು ! ಕೇಳಿಸಿಕೋ ! ಎಂಥ ನೋವು!
ಗ್ರೀಸ್ ಪದದಿಂದ ಬಂದ ಅಲೆಮಾರಿಯೇ
ಹಲವಾರು ವರ್ಷಗಳಿಂದ ದೂರದೂರದ ನಾಡಿಂದ
ಇನ್ನೂ ಗಲಿಬಿಲಿಯಾಗಿರುವ ತಲೆಯಲ್ಲಿ
ಒರಟಾದ, ಶಿರಿಸಲಾರದಂಥಹ, ಆಳವಾಗಿ ಹುದುಗಿರುವ
ನೋವನ್ನು ಪೋಷಿಸುತ್ತೀಯೆ
ಹೇಳು! ಆ ನೋವು ಯಾವತ್ತೂ ಬಿಸಿಯಾಗದೆ?
ಈ ತಂಪು ಸೂಸುವ ಹುಲ್ಲುಗಾವಲಿನಲ್ಲಿರುವ
ತಂಪು ಮರಗು, ಈ ರಾತ್ರಿ
ಈ ಮಧುರವಾದ ಹಾಗು ಶಾಂತವಾದ ಥೇಮ್ಸ್,
ಬೆಳದಿಂಗಳು, ಈ ಮಂಜು ಹನಿ,
ನಿನ್ನ ವೇದನೆ ತುಂಬಿದ ಹೃದಯಕ್ಕೆ ಹಾಗೂ ಮನಸ್ಸಿಗೆ
ಮುಲಾಮಾಗದೆ ?

*****

ಪದ್ಯದ ಮೊದಲನೆಯ ಪದ, 'ಕೇಳು', First person ಧ್ವನಿಯನ್ನು ಸೂಚಿಸುತ್ತದೆ. ಮುಂದೆ ಇದು ನೋಡಲ್ಲಿ! ಆಹಾ! ಈ ಉದ್ಗಾರಗಲ್ಲಿಯೂ ಇದು ಧ್ವನಿತವಾಗುತ್ತದೆ. ಆದರೆ ಪದ್ಯದಲ್ಲೆಲ್ಲಿಯೂ 'ನಾನು' ಪದದ ಭೌತಿಕ ಹಾಜರಾತಿ ಇಲ್ಲ. ಮೊದಲನೆಯ ನುಡಿಯಲ್ಲಿ ಪದ್ಯದ ಮಾತುಗಾರ (Speaker) ಕೇಳುಗ 'ನೊಂದಿಗೆ ಕೋಗಿಲೆಯ ಬಗ್ಗೆ ಮಾತನಾಡುತ್ತಿದ್ದವನು, ಎರಡನೆಯ ನುಡಿಯಲ್ಲಿ ಕೋಗಿಲೆಯೊಂದಿಗೆ ಮಾತನಾಡತೊಡಗುತ್ತಾನೆ. ಇಲ್ಲಿ ಇಬ್ಬರು ಕೇಳುಗರಿದ್ದಾರೆ. ಮೊದಲನೆಯದು ಕೇಳುಗನ ವ್ಯಕ್ತಿತ್ವದ ಬಗ್ಗೆ ನಮಗೆ ಅನಿರೀಕ್ಷಿತವಾಗಿ ತಿಳಿಯುವುದು 'ಕೇಳು', ನೋಡಲಿ ! ಆಹಾ ! ಈ ಉದ್ಗಾರಗಳು ನಮಗೆ ಕೇಳುಗನ ವ್ಯಕ್ತಿತ್ವದ ಬಗ್ಗೆ ಏನನ್ನೂ ಸ್ಪಷ್ಟೀರಿಸುವುದಿಲ್ಲ. ಮೂರನೆ ನುಡಿಯಲ್ಲಿ ಕವಿಯು ತನ್ನ ಮೊದಲನೆಯ ಕೇಳುಗನ ಹೆಸರನ್ನು 'Eugenia' ಎಂದು ಕರೆಯುವುದರಿಂದ, ಮೊದಲನೆಯ ಕೇಳುಗನ ಸ್ವರೂಪ ನಮಗೆ ತಿಳಿಯತೊಡಗುತ್ತದೆ. 'Engenia' ಅಂದರೆ 'ಒಳ್ಳೆಯ ಹುಟ್ಟಿನವಳು ಎಂದರ್ಥ. ಇದು ರಾಜಮನೆತನದಲ್ಲಿ ಹುಟ್ಟಿದ Philomela ಳಿಗೆ ಉದ್ದೇಶಿಸಿದಂಥ ಹೆಸರಿರಬಹುದು. ಏಕೆಂದರೆ ಗ್ರೀಸ್‌ನ ಅಟಿಕಾದ ರಾಜ ಪಾಂಡ್ಯನನ 2 ಹೆಣ್ಣು ಮಕ್ಕಳು ಪ್ರೋಸ್ನಿ ಹಾಗು ಫಿಲೋಮಿಲಾ.

ದೊಡ್ಡವಳು ಪ್ರೋಸ್ನಿಯನ್ನು ತ್ರೇಸ್‌ನ ರಾಜ ತೀರಿಂಯಸ್‌ನಿಗೆ ಮದುವೆ ಮಾಡಿಕೊಡಲಾಗಿತ್ತು. ಆಕೆಯಿಂದ ಆತನಿಗೆ ಇಟಿಯಸ್ ಎಂಬ ಮಗನೂ ಇದ್ದನು. ತೀರಿಯಸ್‌ನು, ತನ್ನ ನಾದಿನಿ, ಫಿಲೋಮಿಲಾ ಮೇಲೆ ಬಲಾತ್ಕಾರವೆಸಗಿ, ಆಕೆ ಯಾರಿಗಾದರೂ ಈ ವಿಷಯ ಹೇಳಿಯಾಳೆಂದು, ಆಕೆಯ ನಾಲಗೆಯನ್ನು ಕತ್ತರಿಸುತ್ತಾನೆ. ಆಕೆ ಕೋಗಿಲೆಯಾಗಿ ರೂಪಾಂತರವಾಗಿ ಶತ ಶತಮಾನಗಳಿಂದಲೂ ತನ್ನ ನೋವನ್ನು ಹಾಡುತ್ತಾಳೆನ್ನುವುದು ಗ್ರೀಕ್‌ನ ದಂತ ಕಥೆ.

ಈ ಕೇಳುಗರು (Philomela)ಳ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳುವುದು ಪದ್ಯದ ಅರ್ಥ ನಿರ್ಮಾಣಕ್ಕೆ ಒಂದು ಪ್ರಮುಖ ಅಂಶವಾಗುತ್ತದೆ. 'Engenia'ಳನ್ನು ನಾವು ಪದ್ಯವನ್ನು ಮಾತನಾಡುತ್ತಿರುವವನ, ನೆರೆಮನೆ ಯಾಕೆಯೋ, ಚಿಕ್ಕಮ್ಮನೋ, ಇರಬಹುದೆಂದು ಅರ್ಥೈಸಲು ಪದ್ಯದ ಯಾವ ಸೂಚಿತವೂ ಇಂಬು ಕೊಡುವುದಿಲ್ಲ. ಆಕೆಯನ್ನು ಪದ್ಯವನ್ನು ಮಾತನಾಡುತ್ತಿರುವುದು, 'ನೀನು' ಎಂದು ಏಕವಚನದಲ್ಲಿ ಮಾತನಾಡಿಸುತ್ತಿರುವುದರಿಂದ ಆಕೆ ಆತನ ಸ್ನೇಹಿತೆಯೋ ಪ್ರೇಯಸಿಯೋ ಎನ್ನುವ ಸೂಕ್ಷ್ಮ ಸೂಚನೆ ದೊರೆಯುತ್ತದೆ.

ಅದಲ್ಲದೆ ಮಾತುಗಾರ ಆಗಾಗ, ಪದೇ ಪದೇ, ಆವೇಶದಿಂದ, ಉದ್ಗರಿಸುವುದು, ಬೆಳದಿಂಗಳು, ಕಾವ್ಯದ ವಾತಾವರಣ, ಪರಿಸರ, ದೃಶ್ಯ, ಕಾವ್ಯಮಯ ಭಾಷೆ, ಆಡಂಬರದ ಪದ ಪ್ರಯೋಗ, ಸಂಭಾಷಣೆಯಿಂದ ಕೂಡಿದ ಸರಳ ಕಾವ್ಯರೂಪ ನಡುವಿನ ವೈರುಧ್ಯಗಳು, ಎಲ್ಲವೂ ಮಾತುಗಾರ ತನ್ನ ಪ್ರೇಯಸಿಯೊಂದಿಗೆ ಸಂಭಾಷಣೆಯಲ್ಲಿ ತೊಡಗಿದ್ದಾನೆನ್ನುವುದೋ ಸ್ಪಷ್ಟೀಕರಿಸುತ್ತದೆ. ಹಾಗಾಗಿ 'Philomela' ಎನ್ನುವ ಕವಿತೆ ಒಂದು ಪ್ರೇಮಕಾವ್ಯ ಅನ್ನುವುದು Fact ಅಲ್ಲದೇ ಹೋದರೂ, ಅಕ್ಷರಗಳಲ್ಲಿ ನೇರವಾಗಿ ಕಾಣದೇ ಹೋದರೂ ಪ್ರೇಮಕಾವ್ಯದ ಸೂಕ್ಷ್ಮಗಳನ್ನು ಸೂಚಿಸುತ್ತದೆ. ಈ ಉದಾಹರಣೆಯಿಂದ ,ನಾವು ಪದ್ಯದ ಅರ್ಥ ನಿರ್ಮಾಣಕ್ಕೆ ಪದ್ಯದ ಧ್ವನಿಗಳ ಸ್ವರೂಪ ಗುರುತು, ಸ್ವಭಾವವನ್ನು ತಿಳಿದುಕೊಳ್ಳುವುದು ಎಷ್ಟು ಪ್ರಮುಖವಾಗುತ್ತದೆ ಎನ್ನುವುದನ್ನು ಗುರುತಿಸಬಹುದಲ್ಲವೆ ?

■

– ಕೆ.ದಿ.ಜ್ಯೋತಿ
ಸರ್ಕಾರಿ ಪದವಿ ಕಾಲೇಜು, ಗುಬ್ಬಿ
jyogowdev@gmail.com

:ವಿಶೇಷ ಸೂಚನೆ:
ಈ ಪತ್ರಿಕೆಗೆ ಲೇಖನಗಳನ್ನು ಕಳುಹಿಸಲು ಇಚ್ಚೈಸುವವರು ನುಡಿ ತಂತ್ರಾಶದಲ್ಲಿ ಟೈಪ್ ಮಾಡಿದ ಲೇಖನಗಳನ್ನು
prathispandha@gmail.com
ಗೆ ಕಳುಹಿಸಬಹುದು.

# ಯಂತ್ರೋತ್ಪಾದನೆ–ಮನರಂಜನೆ

"ಪ್ರಕೃತಿಯಿಂದ ದೂರವಾಗುತ್ತಿರುವ ಮನುಷ್ಯ ಉತ್ಪಾದನೆ ಹಾಗು ಮನರಂಜನೆಗಳ ವಲಯದಲ್ಲಿ ಯಂತ್ರಗಳ ದಾಸನಾಗುತ್ತಿದ್ದಾನೆ"
–ಸರಳ ಬೆನ್, ಮಹಾತ್ಮ ಗಾಂಧಿ ಅನುಯಾಯಿ

ಉತ್ಪಾದನೆಗಾಗಿ ಬಳಕೆಯಾಗುವ ಯಂತ್ರಗಳ ಅತಿ ಬಳಕೆ ದೈಹಿಕ ಶ್ರಮದ ಕುಶಲತೆ ಮತ್ತು ಉತ್ಪಾದನೆಯನ್ನು ಕಿತ್ತುಕೊಳ್ಳುತ್ತದೆ. ಜನಸಂಖ್ಯೆ ವಿರಳವಾಗಿರುವ ಶೀತ ಮತ್ತು ಸಮಶೀತೋಷ್ಣ ವಲಯದ ರಾಷ್ಟ್ರಗಳಲ್ಲಿ ಮಾನವ ಶ್ರಮ ಉಳಿಸುವ ಉದ್ದೇಶವಿರುತ್ತದೆ. ವಿಜ್ಞಾನ ತಂತ್ರಜ್ಞಾನದ ಆವಿಷ್ಕಾರವಾದ ಯಂತ್ರಗಳ ಬಳಕೆ ಅಲ್ಲಿ ಅನಿವಾರ್ಯವಿರಬಹುದು. ಅಪಾರ ಜನಸಂಖ್ಯೆ ಇರುವ ಭಾರತದಂತಹ ದೇಶದಲ್ಲಿ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಬಳಸುವ ಯಂತ್ರಗಳ ಅತಿಬಳಕೆ ಔಚಿತ್ಯವಲ್ಲ. ಅದು ಕೇಂದ್ರದ ಪ್ರಗತಿಗಾಗಿ ಪರಿಧಿಯನ್ನು ಸ್ವಾಹ ಮಾಡಿಬಿಡುತ್ತದೆ. ಅದು ಕೆಲವರಿಗೆ ವರವಾದರೆ ಬಹುಸಂಖ್ಯಾತರಿಗೆ ಶಾಪ. ಯಂತ್ರೋತ್ಪನ್ನಗಳು ಪಡಿಯಚ್ಚುಗಳು. ಅಲ್ಲಿ ವೈವಿಧ್ಯತೆ, ಜೀವಂತಿಕೆ ಇರುವುದಿಲ್ಲ. ಮನುಷ್ಯನ ಉಪಯುಕ್ತತೆಗೆ ಇರಬೇಕಾದ ಯಂತ್ರಗಳು ಅವನ ಮೇಲೆ ಅಧಿಕಾರ ಸ್ಥಾಪಿಸುವ ಸನ್ನಿವೇಶದ ಸ್ಥಿತಿ ನಿರ್ಮಾಣ. ನಿರುದ್ಯೋಗ, ಬಡತನ, ಪರಿಸರದ ಮೇಲಿನ ಒತ್ತಡ, ಅನಾರೋಗ್ಯದಂತಹ ಸಮಸ್ಯೆಗಳ ಉಲ್ಬಣ. ಯಂತ್ರಾವಲಂಬನೆಯ ಉತ್ಪಾದನೆ ದೈಹಿಕ ಶ್ರಮವಿಲ್ಲದ ಬಡತನಕ್ಕೆ ದೈನ್ಯತೆ ತಂದು ನಡುಬಗ್ಗಿಸುತ್ತದೆ.

ಆಧುನಿಕ ಶಿಕ್ಷಣಾಧಾರಿತ ಶ್ರಮ ಮತ್ತು ರೂಢಿಗತ ದೈಹಿಕ ಶ್ರಮದ ಬೇಧ, ಬುದ್ಧಿ ಶ್ರೇಷ್ಠ, ದೈಹಿಕ ಶ್ರಮ ಕನಿಷ್ಠ ಎಂಬ ಭ್ರಮೆ, ಈ ವಿಭಜನೆಯಿಂದ ಅಸಮಾನತೆ ಹೆಚ್ಚುತ್ತದೆ. ಕೀಳರಿಮೆ ಬಿತ್ತುತ್ತದೆ. ತಾಜ್ ಮಹಲ್ ಕಟ್ಟಡದ ಬಿರುಕು ಮುಚ್ಚುವಲ್ಲಿ ವೃತ್ತಿ ನಿರತ ಇಂಜಿನಿಯರ್ ಗಳು ಸೋತಿದ್ದರು. ಪರಂಪರೆಯಿಂದ ಕಟ್ಟಡ ಕೆಲಸದ ಅನುಭವವಿದ್ದ ದಲಿತ ವೃದ್ಧ ಕೆಲಸಗಾರನ ಕೈ ಚಳಕ ಆ ಬಿರುಕನ್ನು ಕುರುಹು

ಮಹಲ್ ಕಟ್ಟಡದ ಬಿರುಕು ಮುಚ್ಚುವಲ್ಲಿ ವೃತ್ತಿ ನಿರತ ಇಂಜಿನಿಯರ್‌ಗಳು ಸೋತರು. ಪರಂಪರೆಯಿಂದ ಕಟ್ಟಡ ಕೆಲಸದ ಅನುಭವವಿದ್ದ ದಲಿತ ವೃದ್ಧ ಕೆಲಸಗಾರನ ಕೈಚಳಕ ಬಿರುಕು ಕರುಹು ಇಲ್ಲದಂತೆ ಮುಚ್ಚಿತು. ಅಂಬೇಡ್ಕರ್ ಬ್ರಿಟೀಷ್ ಆಡಳಿತದಿಂದ ಆತನಿಗೆ ಉನ್ನತ ಸ್ಥಾನಮಾನದ ಹುದ್ದೆ ಕೊಡಿಸಿದ್ದನ್ನು ಉಲ್ಲೇಖಿಸಿದ್ದಾರೆ.

ಸಾಮ್ರಾಜ್ಯ ಶಾಹಿ ಮತ್ತು ಬಂಡವಾಳಶಾಹಿ ವ್ಯವಸ್ಥೆ ಉತ್ಪಾದನೆಯ ಫಲವನ್ನು ತನ್ನ ಅದೀನದಲ್ಲಿಟ್ಟುಕೊಳ್ಳಲು ಹವಣಿಸುತ್ತದೆ. ಆಗ ವಿಜ್ಞಾನ ಮತ್ತು ತಂತ್ರಜ್ಞಾನದ ದುರ್ಬಳಕೆ, ರಾಷ್ಟ್ರ–ರಾಷ್ಟ್ರಗಳ ಮಧ್ಯೆ ತಾರತಮ್ಯ. "ಬಲಾಢ್ಯ ಪೃಥ್ವೀ ಪತಿ" ಎಂದಾಗುತ್ತದೆ. ಅಭಿವೃದ್ಧಿಯ ಹೆಸರಿನಲ್ಲಿ ಭೂಮಿಯ ಮೇಲಿನ ಅಮೃತ ಸಮಾನವಾದ ನಿಸರ್ಗ ದುರ್ಬಳಕೆಯಾಗಿ ವಿಷವಾಗುತ್ತದೆ. ತತ್‌ಕ್ಷಣದ ಸ್ವಲಾಭಕ್ಕಾಗಿ ಆಯಕಟ್ಟಿನಲ್ಲಿರುವವರು ಎಲ್ಲವನ್ನೂ ನಿಯಂತ್ರಿಸುತ್ತಾರೆ. ಪ್ರಕೃತಿಯ ಸಂಪನ್ಮೂಲಗಳು ಮಲಿನವಾಗುತ್ತವೆ. ಮನುಕುಲವೇ ಬಿಕ್ಕಟ್ಟನ್ನು ಎದುರಿಸಬೇಕಾಗುತ್ತದೆ. ಪರಿಸರಕ್ಕೆ ಪೂರಕವಾದ ಉತ್ಪಾದನೆಯಲ್ಲಿ ವೈವಿಧ್ಯತೆ, ಜೀವಂತ ಸೊಗಸಿರುತ್ತದೆ. ಅನುಭವದ ನಿರಂತರತೆ ಇರುತ್ತದೆ. ಕೃತಕತೆ, ಯಾಂತ್ರಿಕತೆ ಇರುವುದಿಲ್ಲ. ಸಮತೆ ಮತ್ತು ಸಂಪತ್ತು ಅಭಿವೃದ್ಧಿ ಪಥದ ಎರಡು ಚಕ್ರಗಳು. ದುಡಿಮೆ ಮತ್ತು ಪ್ರಕೃತಿಯ ನಡುವೆ ಅವಿನಾಭಾವ ಸಂಬಂಧವಿದ್ದಾಗ ನಿಸರ್ಗ ನಳನಳಿಸಿ ಸಂಭ್ರಮಿಸುತ್ತದೆ. ಜೀವರಾಶಿ ನೆಮ್ಮದಿ ಕಾಣುತ್ತದೆ.

ಬಂಡವಾಳಶಾಹಿ ಆಧಾರಿತ ಕೈಗಾರಿಕಾ ವ್ಯವಸ್ಥೆಯಲ್ಲಿ ಮನರಂಜನೆ ಮತ್ತು ಸಂಸ್ಕೃತಿಯ ಹೆಸರಿನ ಸರಕು ಸೇವೆಗಳು ವಿಜೃಂಭಿಸುವವು. ಗ್ರಾಹಕರ ಬೇಡಿಕೆ ಪೂರೈಸುವ ನೆಪದಲ್ಲಿ ವ್ಯಾಪಾರಿ ವಲಯ ವಿಸ್ತರಿಸುತ್ತದೆ. ಆಢಳಿತ ಮತ್ತು ಅಧಿಕಾರ ಸೂತ್ರ ಹಿಡಿದ ಆಯಕಟ್ಟಿನಲ್ಲಿರುವವರು ಇದನ್ನು ಬೆಂಬಲಿಸುತ್ತಾರೆ. ಕಲಾಮಾಧ್ಯಮಗಳ ಮೂಲಕ ಪಾರ್ಟಿ–ಪಕ್ಷ ರಾಜಕೀಯ–ಮತೀಯ ಸಿದ್ಧಾಂತಗಳನ್ನು

ಪ್ರಚಾರಮಾಡುತ್ತಾರೆ. ಜನಪ್ರಿಯ ಸಂಸ್ಕೃತಿಯು ಟಿ.ವಿ, ರೇಡಿಯೋ, ಆರ್ಕೆಸ್ಟ್ರಾ, ಪತ್ರಿಕೆ, ಸಾಹಿತ್ಯ, ಸಂಗೀತ, ವಾಸ್ತು, ಶಿಲ್ಪ, ನೃತ್ಯ ಮತ್ತು ಇತರ ಪ್ರದರ್ಶನ ಹಾಗು ವ್ಯವಸ್ಥೆಯ ಉದ್ದೇಶ-ಹೂಡಿಕೆ-ಬೇಡಿಕೆ-ಪೂರೈಕೆಗಳ ಮೂಲಕ ಲಾಭಗಳಿಸುವುದೇ ಆಗಿರುತ್ತದೆ.

ಜನಪ್ರಿಯ ಸಂಸ್ಕೃತಿಯು ಮನರಂಜನೆಯೇ ಗುರಿ ಎಂಬ ಭ್ರಮೆ ಬಿತ್ತುತ್ತದೆ. ವಾಸ್ತವ, ನೈಜ ಕಲೆ ಮತ್ತು ಸಂಸ್ಕೃತಿಯನ್ನು ಜನರಿಂದ ದೂರಮಾಡುತ್ತದೆ. ಗಾಯನ, ಸಂಗೀತ, ನೃತ್ಯಗಳಿಗಿರಬೇಕಾದ ಸಿದ್ಧತೆ, ಸಾಧನೆಯ ಸೊಗಡು ಇದಕ್ಕೆ ಬೇಕಿಲ್ಲ. ಮುದ್ರಿತ ಹಾಡುಗಳನ್ನು ಮೈಕ್ ಸೆಟ್ ಮೂಲಕ ಬಿತ್ತರಿಸುವುದು, ಆ ಹಾಡುಗಳ ಧ್ವನಿಗೆ ತಕ್ಕಂತೆ ಮೈ-ಕೈ ಕುಣಿಸುವುದೇ ಕಲಾಭಿವ್ಯಕ್ತಿ ಎನಿಸುವಷ್ಟರ ಮಟ್ಟಿಗೆ ಯಾಂತ್ರಿಕತೆ, ಕೃತಕತೆ ಪ್ರಚಲಿತ. ಕ್ಷಣಿಕ ರಂಜನೆಗೆ ಒಳಗು ಮಾಡಿ ಸಮೂಹ ಸನ್ನಿಯನ್ನು ಬಿತ್ತಿ, ಅನುಭೋಗಿ ಸಂಸ್ಕೃತಿಯನ್ನು ವಿಸ್ತರಿಸುತ್ತದೆ.

ಸುಮಾರು 30-40 ವರ್ಷಗಳ ಹಿಂದೆ ದಕ್ಷಿಣ ಭಾರತದ ದೇವಸ್ಥಾನಗಳಲ್ಲಿ, ಅದರಲ್ಲೂ ಮಧುರೆಮೀನಾಕ್ಷಿ ದೇವಾಲಯದಲ್ಲಿ ನಾನು ಗಮನಿಸಿದಂತೆ ಪ್ರಾತಃ ಕಾಲದಲ್ಲಿ ಹತ್ತಾರು ತಂಡಗಳು ಹಿರಿಯ ಅನುಭವಿ ಪರಿಣಿತ ಸಾಧಕನ ಮಾರ್ಗದರ್ಶನದಲ್ಲಿ ಭಕ್ತಿಭಾವದಿಂದ ಮಂಗಳ ವಾದ್ಯಗಳನ್ನು ನುಡಿಸುವ ಪರಿಪಾಠವಿತ್ತು. ಅಲ್ಲಿ ಸಾಧನೆ ಮತ್ತು ಭಕ್ತಿ ಭಾವಗಳ ಮಿಲನ, ದೈವೀ ಭಾವಗಳ, ಮನುಷ್ಯ ಸಂಬಂಧಗಳ ಸಂವಹನವಿರುತ್ತಿತ್ತು. ಆದರೆ ಇಂದು ಸುಪ್ರಭಾತದ ಹೆಸರಿನಲ್ಲಿ ಮುದ್ರಿತ ಕ್ಯಾಸೆಟ್‌ಗಳನ್ನು ಬಿತ್ತರಿಸುವುದು ಎಲ್ಲಾ ದೇವಾಲಯಗಳಲ್ಲಿ ಕೇಳುತ್ತೇವೆ. ಇಲ್ಲಿ ಭಕ್ತಿ-ಭಾವಗಳು ಹಾಗು ಕಲಾಸಾಧನೆಯು ಶೂನ್ಯ. ರಂಜನೆಯ ಹೆಸರಿನಲ್ಲಿ ಉತ್ಪಾದನೆಯ ಸರಕುಗಳು ಬಿಕರಿಯಾಗುತ್ತವೆ. ಆಯ್ಕೆಯ ಸ್ವಾತಂತ್ರ್ಯವನ್ನು ಕಸಿಯುತ್ತದೆ. ಕುಟುಂಬ ಸಾಮಾಜಿಕ ಮೌಲ್ಯಗಳು ವ್ಯತ್ಯಸ್ತವಾಗುತ್ತವೆ. ಜನಪ್ರಿಯ ಸಂಸ್ಕೃತಿ ಮತ್ತು ಕಲೆಯ ಹೆಸರಿನಲ್ಲಿ ರಂಜಿಸುವವರ ವಿವೇಚನೆ, ಸಹಜತೆ-ಸಾಮರ್ಥ್ಯಗಳನ್ನು ಮುಸುಕಾಗಿಸುತ್ತದೆ. ಪ್ರಾಚೀನ ಸಂಸ್ಕೃತಿ ಮತ್ತು ಕಲೆಗಳನ್ನು, ಜನಪ್ರಿಯ ಸಂಸ್ಕೃತಿ ಹಾಗು ಕಲೆಗಳ ಹೆಸರಿನಲ್ಲಿ ಉತ್ಪಾದನಾ ಲಾಭಕ್ಕಾಗಿಯಾದರೂ ಯಂತ್ರ-ತಂತ್ರಜ್ಞಾನಗಳ ಮೂಲಕ ಜಗತ್ತಿನಾದ್ಯಂತ ಪ್ರಸಾರವಾಗುತ್ತಿರುವುದು ಸಮಾಧಾನಕರ.

– ಕೆ.ಆರ್. ಬಸವರಾಜು

| ಕವಿತೆ | ಝಣ ಝಣಾ ಕಾಂಚಾಣ |
|---|---|

ಝಣ ಝಣಾ ಕಾಂಚಾಣ
ಜನಗಳ ನಡುವಲ್ಲಿ ಜಗದಗಲ ಬಿರುಕನ್ನು
ಮೂಡಿಸಿಹುದು

ತನು ಮನದ ಭಾವ ದೀವಟಿಗೆಯನ್ನು
ಜನ ಮನದ ಪ್ರೀತಿಯ ಬಾಂಧವ್ಯವನ್ನು
ಭ್ರಾತೃತ್ವ, ಮಿತ್ರತ್ವಗಳ ಪಾವಿತ್ರ್ಯವನ್ನು
ಶಾಂತಿ ಸೌಹಾರ್ದತೆಯ ಸಂಕೇತಗಳನ್ನು
ತನ್ನ ಬಾಹುಳ್ಯದ ಬಾಹುಬಂಧನದಿಂದ
ಪಾತಾಳದಂಚಿಗೆ ದೂಡುತಿಹುದು

ಜನಮನದ ಶುಭ್ರ ನೀಲಾಕಾಶದಲ್ಲಿ
ಕಾರ್ಮೋಡ ಮೂಡಿಸುತ್ತಾ
ಮನುಕುಲದ ಮನಸಿನ ಶಾಂತ ಸಾಗರದಲ್ಲಿ
ಕ್ರೌರ್ಯದ ಕಿಚ್ಚನ್ನು ಮೂಡಿಸುತ್ತಲಿಹುದು
ಕನಸಿನ ಬೆನ್ನೇರಿ ಸಾಧನೆಗೆ ಹಾತೊರೆಯುವ
ಹಾಲು ಮನಸಿಗೆ ವಿಷವ ಬೆರೆಸುತಿಹುದು
ಹೂ ಮನವ ಕ್ಷೋಭೆಗೆ ಒಳಪಡಿಸುತ್ತಲಿಹುದು

ಜಾಗತೀಕರಣ ಖಾಸಗೀಕರಣದ ಬರದಲ್ಲಿ
ಮಾನವೀಯತೆಯನ್ನು ಮರೆಸುತ್ತಾ ಮರೆಸುತ್ತಾ
ಬಡವ ಬಲ್ಲಿದರೆಂಬ ಗೋಡೆಯ ಕಟ್ಟುತ್ತಾ
ಅಂತರಂಗದ ಕದವ ಮುಚ್ಚುತ್ತಾ ಮುಚ್ಚುತ್ತಾ
ಜನರನ್ನು ಪ್ರೀತಿಯ ನೆಲೆಗಟ್ಟಿನಿಂದಾಚೆಗೆ
ಕರೆದೊಯ್ಯುತಿಹುದು ಕರೆದೊಯ್ಯುತಿಹುದು

ಝಣ ಝಣಾ ಕಾಂಚಾಣ
ಜನಗಳ ನಡುವಲ್ಲಿ ಜಗದಗಲ ಬಿರುಕನ್ನು
ಮೂಡಿಸಿಹುದು
ಮೂಡಿಸುತ್ತಲಿಹುದು...

– ಎಂ.ಎಸ್.ಚೇತನ್ ಕುಮಾರ್
ಶಿಕ್ಷಕರು, ಬೃಂದಾವನ ಸ್ಕೂಲ್
ಕೆ.ಜಿ.ಟೆಂಪಲ್
ಮೊ: 9620242034

ಅನುವಾದ/ ವಿಮರ್ಶೆ

# ಸಾಹಿತ್ಯದಲ್ಲಿ ಸಬಾಲ್ಟರ್ನ್‌ರ ಪ್ರತಿನಿಧೀಕರಣ: ಮಹಾಶ್ವೇತಾದೇವಿಯ ಸ್ತನದಾಯಿನಿ

(ಗಾಯತ್ರಿ ಚಕ್ರವರ್ತಿ ಸ್ಪಿವಾಕ್ ಕೊಲಂಬಿಯಾ ವಿಶ್ವವಿದ್ಯಾಲಯದಲ್ಲಿ ಆಂಗ್ಲ ಸಾಹಿತ್ಯ ಬೋಧಿಸುವ ಬಂಗಾಳಿ ಮೂಲದ ಭಾರತೀಯ ಸ್ತ್ರೀವಾದಿ ಚಿಂತಕರು. ಎಡ್ವರ್ಡ್ ಸೈದ್ ತರಹ ತೃತೀಯ ಜಗತ್ತಿನ ಅಸ್ಮಿತೆಗಾಗಿ ಹೋರಾಡುತ್ತಿರುವವರು. ಭಾರತೀಯ ಸಂಸ್ಕೃತಿ ಮತ್ತು ಸಾಹಿತ್ಯದ ಸನ್ನಿವೇಶದಲ್ಲಿ ಸ್ತ್ರೀವಾದವನ್ನು ಕುರಿತ ಅಧ್ಯಯನ ಅವರ ಆಸಕ್ತಿಯ ಕ್ಷೇತ್ರ.

ಮಹಾಶ್ವೇತಾದೇವಿ ಬಂಗಾಳಿ ಸಾಹಿತಿ. ತಮ್ಮ ಕತೆಗಳಲ್ಲಿ ಆದಿವಾಸಿಗಳ, ಬಡವರ ಬಗ್ಗೆ ವಾಸ್ತವ ಚಿತ್ರಣಗಳನ್ನು ನೀಡುವಲ್ಲಿ ಸಿದ್ಧಹಸ್ತರು. ಮಹಾಶ್ವೇತಾ ದೇವಿಯವರ ಸ್ತನದಾಯಿನಿ ಕತೆಯನ್ನು ಗಾಯತ್ರಿ ಸ್ಪಿವಾಕ್ ಇಂಗ್ಲೀಷ್‌ಗೆ ಅನುವಾದಿಸಿದ್ದಾರೆ. ಅನುವಾದಕ್ಕೆ ಮೊದಲು ಮುನ್ನುಡಿಯಾಗಿ ಬರೆದಿರುವ ಲೇಖನವನ್ನು ಇಲ್ಲಿ ಅನುವಾದಿಸಲಾಗಿದೆ.)




ಪ್ರತಿದಂಗೆಯ ಪಠ್ಯವನ್ನು ಇತಿಹಾಸಕಾರ ಎದುರಾದಾಗ ಪಠ್ಯದಲ್ಲಿನ ಸಿಕ್ಕುಗಳನ್ನು ಬಿಡಿಸಿ ಅಲ್ಲಿ ಪ್ರತಿನಿಧಿತವಾಗಿರುವ ಸಬಾಲ್ಟ್ರನ್ ಗೆ ಹೊಸದಾದ ಕರ್ತೃ ಸ್ಥಾನ(Subject-Position) ವನ್ನು ನೀಡುತ್ತಾನೆ. ಹಾಗೆಯೇ ಸಾಹಿತ್ಯವನ್ನು ಬೋಧಿಸುವ ಅಧ್ಯಾಪಕಿ ಯೋರ್ವಳು ಒಂದು ಸಹಾನುಭೂತಿಯ ಪಠ್ಯವನ್ನು ಎದುರಾದಾಗ ಅಲ್ಲಿ ಪ್ರತಿನಿಧಿತವಾಗಿರುವ ಸಬಾಲ್ಟ್ರನ್ ಗೆ ಈ ಮುಂಚೆಯೇ ನಿರ್ದೇಶಿತವಾಗಿರುವ ಕರ್ತೃ ಸ್ಥಾನವನ್ನು ತೆರೆದು ಮುಕ್ತವಾಗಿಸಲು ಪ್ರಯತ್ನಿಸುತ್ತಾಳೆ.

ಈ ಎರಡೂ ನಡೆಗಳು ಸಾದೃಶವಾಗಿ ರಬಹುದು ಆದರೆ ಅನನ್ಯವಲ್ಲ. ಮಹಾಶ್ವೇತಾದೇವಿಯ ಸ್ತನದಾಯಿನಿ ಪಠ್ಯವನ್ನು ಬೋಧಿಸುವ ತಂತ್ರವಾಗಿ ಈ ಲೇಖನವು ಈ ಕುರಿತಾದ ಸಾಮ್ಯತೆ ಮತ್ತು ಭಿನ್ನತೆಗಳನ್ನು ಚರ್ಚಿಸುತ್ತದೆ. ಈ ಇಡೀ ಲೇಖನದ ಕೊನೆಯಲ್ಲಿ ಓದುಗರಿಗೆ ಈ ಕೆಳಗಿನ ವಿಷಯಗಳು ಮನದಟ್ಟಾಗಬಹುದೆಂದು ನಿರೀಕ್ಷಿಸುತ್ತೇನೆ.

- ಒಬ್ಬ ಇತಿಹಾಸಕಾರನ/ಳ ಮತ್ತು ಸಾಹಿತ್ಯ ಬೋಧಕನ/ಳ ಚಟುವಟಿಕೆಗಳು ವೈಚಾರಿಕವಾಗಿ ಪರಸ್ಪರ ಅಡ್ಡಿಯನ್ನುಂಟು ಮಾಡಬೇಕು. ತಮ್ಮ ತಮ್ಮ ಕಾರ್ಯಕ್ಷೇತ್ರಗಳಲ್ಲಿ ಸಮರ್ಪಕವಾಗಿ ಕಾರ್ಯ ನಿರ್ವಹಿಸಲು ಪೂರಕವಾಗುವಂತೆ ಇವರಿಬ್ಬರೂ ಘರ್ಷಣೆಗೆ ಒಳಪಡಬೇಕು.
- ಸಾಹಿತ್ಯವನ್ನು ಬೋಧಿಸುವವರು ತಮ್ಮ ಅಕಾಡೆಮಿಕ್ ಎಂಬ ಸಾಂಸ್ಥಿಕ ಸ್ಥಾನದ ಬಲದಿಂದ ಪಠ್ಯದ ಉಪಯೋಗವನ್ನು ಹೆಚ್ಚಿಸಲು ಅದನ್ನು ಮರುಜೋಡಿಸಬೇಕಾಗುತ್ತದೆ. ಪಠ್ಯವನ್ನು ಅದರ ನಿಜವಾದ ಸನ್ನಿವೇಶದಿಂದ ತೆಗೆದು ಪರಕೀಯ ನೆಲೆಗಳ ನಡುವೆ ಇಟ್ಟು ತಿರುಚಿ ನೋಡಬಹುದು.
- 'ಸ್ತನದಾಯಿನಿ' ಪಠ್ಯವನ್ನು ಪಾಶ್ಚಾತ್ಯ ಮಾರ್ಕ್ಸ್ ಸ್ತ್ರೀವಾದದ, ಪಾಶಾತ್ಯ ಉದಾರವಾದೀ ಸ್ತ್ರೀವಾದದ ನೆಲೆಯಲ್ಲಿ ಇಟು ಓದುವುದರಿಂದ ಈ ವಾದಗಳ ಮಿತಿಯನ್ನೂ ಸಹ ಗಮನಿಸಬಹುದು.
- ಪ್ರಸ್ತುತದಲ್ಲಿ ಇಂತಹ ಓದುಗಳು ನಿರಂತರವಾದ ಸಬಾಲ್ಟ್ರನೀಕರಣದಿಂದ ತೃತೀಯ ಜಗತ್ತಿನ ಸಾಹಿತ್ಯ ಪಠ್ಯಗಳ ಮೇಲಾಗುತ್ತಿರುವ ಪರಿಣಾಮಗಳ ಮೇಲೆ ಬೆಳಕು ಚಲ್ಲುತ್ತದೆ.
- ಸಬಾಲ್ಟ್ರನ್ ವಸ್ತುವಿನ ಕುರಿತಾಗಿ ಅಧ್ಯಯನ ನಿರತವಾದ ಇಲೈಟ್ ವಿಧಾನಗಳು ಅಳವಡಿಸಿಕೊಳ್ಳುವ ಪಕ್ಷಪಾತದ ಪ್ರಶ್ನೆಯನ್ನೂ ಸಹ ಈ ಲೇಖನವು ಸ್ಪರ್ಶಿಸಲು ಪ್ರಯತ್ನಿಸುತ್ತದೆ. ಇತಿಹಾಸದ ಪಠ್ಯವಾಗಲೀ, ಸಾಹಿತ್ಯದ ಪಠ್ಯವಾಗಲೀ ಜಂಡರ್ ನೆಲೆಯಲ್ಲಿ ಸಬಾಲ್ಟ್ರನ್ ಆದವರ ಸಮಸ್ಯೆಗೆ ಏನು ಮಾಡಬೇಕು ಎಂಬುದನ್ನು ಬಗೆಹರಿಸಲಾರವು. ಸಾಮಾಜಿಕ ನ್ಯಾಯಕ್ಕಾಗಿ ಮಹಿಳೆಯರ ಪ್ರಭಾವೀ ವಲಯದಿಂದ ಸಹಾಯ ಬೇಡುವ ತುರ್ತಿಗಿಂತ, ಸಮಸ್ಯೆಯ ವಿಸ್ತಾರ ಮತ್ತು ಅದನ್ನೊಳಗೊಂಡ ರಾಜಕಾರಣವನ್ನು ಸಮಾಧಾನದಿಂದ ಚರ್ಚಿಸಲು ಈ ಪ್ರಬಂಧವು ಅನುವುಮಾಡಿಕೊಡುತ್ತದೆ.

I

<u>ಇತಿಹಾಸಕಾರ ಮತ್ತು ಸಾಹಿತ್ಯದ ಶಿಕ್ಷಕ:</u>

ಐತಿಹಾಸಿಕ ಕಥನಗಳ ಉತ್ಪಾದನೆಯೆಂದರೆ ಘಟನೆಗಳ ವಿಮರ್ಶಾತ್ಮಕ ವ್ಯಾಖ್ಯಾನ. ಸೈದ್ಧಾಂತಿಕ ಆಧಾರಗಳನ್ನು ಪ್ರಜ್ಞಾಪೂರ್ವಕವಾಗಿ ಅಲಕ್ಷಿಸುವ ಇತಿಹಾಸ ಲೇಖನವು ತನ್ನ ಸಮಕಾಲೀನ ಪ್ರತಿಸ್ಪರ್ಧಿ ಐತಿಹಾಸಿಕ ಕಥನಗಳಿಗೆ ಅನ್ವಯಿಸಿ 'ನಿಜವಾಗಿ ಏನು ನಡೆಯಿತು' ಎಂಬುದನ್ನು ಮೌಲ್ಯಯುತವಾದ ತಟಸ್ಥ ಗದ್ಯದಲ್ಲಿ ವ್ಯಕ್ತಪಡಿಸಲು ಪ್ರಯತ್ನಿಸುತ್ತದೆ. ಇತಿಹಾಸ ಶಿಕ್ಷಣವನ್ನು ಸಿದ್ಧಾಂತವು ದಾಳಿ ಮಾಡಿದಾಗಿನಿಂದ ಮತ್ತು Michael Foucault ನ ಆಗಮನವಾದ ಮೇಲೆ 'ಘಟನೆ' ಗಳು ವಿಮರ್ಶಕವಾಗಿ ರೂಪಿತವಾಗಿಲ್ಲದೇ ಇಲ್ಲ ಮತ್ತು ಇತಿಹಾಸ ಲೇಖನದ ಭಾಷೆಯೂ ಕೂಡ ಭಾಷೆಯೇ ಎಂಬುದನ್ನು ಒಪ್ಪಬೇಕಾಗುತ್ತದೆ.



ಮಹಾಶ್ವೇತಾ ದೇವಿ

ಸಂಕಥನಗಳ ರಚಿತಗಳಾಗಿ ಇತಿಹಾಸ ಮತ್ತು ಸಾಹಿತ್ಯದಲ್ಲಿನ ಪ್ರತಿನಿಧೀಕರಣಗಳಿಗೆ ಕ್ರೀಯಾಶೀಲವಾದ ಸಂಬಂಧವಿದೆ. ಭಾಷೆ ಕೇವಲ ಘಟನೆಗಳನ್ನು ವರದಿಮಾಡುವ ಸಲುವಾಗಿಯೇ ಇವೆಯೇ ಎಂದು ವ್ಯಾಖ್ಯಾನಿಸುವ Foucault ಭಾಷೆಯ ಅಂಗಗಳಾದ ವಾಕ್ಯಗಳು, ಹೇಳಿಕೆಗಳು ಮತ್ತು ಚಿಹ್ನೆಗಳಿಗೆ ಮತ್ತು Statement ನ ನಡುವಿನ ಭಿನ್ನತೆಯನ್ನು ತೋರಿಸುತ್ತಾನೆ. Foucault ವಿವರಿಸುವ ಹಾಗೆ Statement ಎಂಬುದು ಭಾಷಾ ಅಸ್ತಿತ್ವದ ಸ್ವಾಭಾವಿಕ ಕ್ರಿಯೆಯಾಗಿರುತ್ತದೆ. ಇದನ್ನು ಆಧರಿಸಿಯೇ ಭಾಷೆಯ ಅರ್ಥವು ಯುಕ್ತವಾಗಿದೆಯೇ ಇಲ್ಲವೇ ಎಂಬುದನ್ನು ನಿರ್ಧರಿಸಲಾಗುತ್ತದೆ. ಕರ್ತೃವಿನ ಸ್ಥಾನ (The Place of I) ವನ್ನು ನಿಗಧಿಪಡಿಸುವುದು ಕೂಡ Statement ನಲ್ಲಿ ಒಳಗೊಂಡಿರುತ್ತದೆ. ಈ Statement ನ ಕರ್ತೃ ಮತ್ತು ಕೃತಿಯ ಕರ್ತೃ ಅನನ್ಯವೆಂದು ತಿಳಿಯಬೇಕಿಲ್ಲ. Statement ನ ಕರ್ತೃ ಮೌಖಿಕ ಅಥವಾ ಬರಹದ ಯುಕ್ತತೆಯ ಕಾರಣವಾಗಲೀ, ಮೂಲವಾಗಲೀ, ಆದಿಭಾಗವಾಗಲೀ ಅಲ್ಲ... ಇದು ಸ್ಥಿರವಾದ, ಚಲನೆಯಿಲ್ಲದ, ಬದಲಾವಣೆಯಿಲ್ಲದ ಸರಣಿ ಕಾರ್ಯಾಚಾರಣೆಯ ಅಖಾಡವಲ್ಲ... ಭಿನ್ನ ತರಹದ ವ್ಯಕ್ತಿಗಳು ಆಕ್ರಮಿಸಬಹುದಾದ ಇದು ದೃಢವಾದ, ಖಾಲಿ ಜಾಗ... ಹೇಳಿಕೆಗಳು, ಒಂದು ವಾಕ್ಯ ಒಂದು ಚಿಹ್ನೆಯ ಗುಂಪನ್ನು Statement ಎಂದು ಕರೆಯಬಹುದಾದರೆ, ಯಾವತ್ತೋ ಒಂದು ದಿನ, ಇವುಗಳನ್ನು ಯಾರೋ ಒಬ್ಬರು ಹೇಳುತ್ತಾರೆ, ಅಥವಾ ಹಂಗಾಮಿಯಾಗಿ ತಮ್ಮ ಗುರುತನ್ನು ಕರ್ತೃವಿಗೆ ನಿಗಧಿ ಪಡಿಸಿದ ಸ್ಥಾನದಲ್ಲಿ ಎಲ್ಲೋ ಇಡುತ್ತಾರೆ ಎಂದಲ್ಲ.

ಈ Statement ಎಂಬುದು ಹೇಗೆ ರೂಪುಗೊಳ್ಳುತ್ತದೆ. ಎಂಬುದು ಕೃತಿಯ ಕರ್ತೃ ಮತ್ತು ಆತ/ಆಕೆ ಹೇಳುವ ಮಾತಿನ ಸಂಬಂಧವನ್ನು ವಿಶ್ಲೇಷಿಸುವುದರಿಂದ ಬರುವುದಿಲ್ಲ, ಬದಲಾಗಿ ಕರ್ತೃವಾಗುವ ಯಾವುದೇ ವ್ಯಕ್ತಿ ಯಾವ ಸ್ಥಾನವನ್ನು ಆಕ್ರಮಿಸಿಕೊಳ್ಳಬಲ್ಲ, ಯಾವ ಸ್ಥಾನವನ್ನು ಆಕ್ರಮಿಸಿಕೊಳ್ಳಬೇಕು ಎಂಬುದನ್ನು ನಿರ್ಧರಿಸುವುದರಲ್ಲಿ ಇರುತ್ತದೆ. Statement ಅನ್ನು ಅರ್ಥ ಮಾಡಿಕೊಳ್ಳುವುದೆಂದರೆ ವಾಕ್ಯಗಳು ಏನನ್ನು ವರದಿಮಾಡುತ್ತವೆ/ಹೇಳುತ್ತವೆ ಎಂಬುದನ್ನು ನಿರ್ಲಕ್ಷಿಸುವುದಲ್ಲ. ಬದಲಾಗಿ ಯಾವುದು ಹೇಗೆ ಮಾಡಲ್ಪಟ್ಟಿದೆ ಎಂಬ ಪೂರ್ವ ನಿಯಮವನ್ನು ತಿಳಿಯುವುದರಿಂದ ಇದನ್ನು ಅರ್ಥ ಮಾಡಿಕೊಳ್ಳಬಹುದು.

ವಿಮರ್ಶಾತ್ಮಕತೆಯು ರೂಪುಗೊಳ್ಳುವುದು (Discursive formation) ವಸ್ತು (Object)ಗಳ, ಸಾರಿಹೇಳುವ ವಿಧಿತ ಕ್ರಮಗಳ, ಚಿಂತನಾರೂಪಗಳ(concepts) ಮತ್ತು ಯುಕ್ತಿಗಳ(strategies) ರೂಪುಗೊಳ್ಳುವಿಕೆಯಿಂದ. ಸರಳ ಹೇಳಿಕೆ/ವರದಿ ಯಾವುದೂ ಇದರ ವ್ಯೂಹ ರಚನೆಯಿಂದ ತಪ್ಪಿಸಿಕೊಳ್ಳಲಾರವು. ಕರ್ತೃವು ಒಂದು ನಿಲುವನ್ನು ವಹಿಸಿಕೊಳ್ಳುವಂತೆ ವರದಿ ಅಥವಾ ಹೇಳಿಕೆಯು ಒತ್ತಾಯಿಸುತ್ತದೆ. ಈ ವರದಿ/ಕಥೆಯನ್ನು (ಇತಿಹಾಸದ/ಸಾಹಿತ್ಯದ ವಿಷಯ) ನಿಭಾಯಿಸುವ ಯಾರೇ ಆಗಲಿ ಈ ನಿರ್ದಿಷ್ಟ ನಾನು–ಜಾಡನ್ನು (I-Slot) ಆಕ್ರಮಿಸಿ

ಕೊಳ್ಳಬೇಕಾಗುತ್ತದೆ. ಇದರ ವಿಶಿಷ್ಟತೆಯು ಒಂದು ಚಿಹ್ನೆಯಾಗಿರುತ್ತದೆ. ಅದು ಒಂದು ಸಮಾಜೋ–ರಾಜಕೀಯವಾದ, ಮನೋ–ಲೈಂಗಿಕವಾದ, ಸಾಂಸ್ಕೃತಿಕ–ಶಿಸ್ತಿನ ಅಥವಾ ಕುಲಸಂಬಂಧೀ– ಅರ್ಥಿಕತೆಯ ಮೂಲವನ್ನು ಸೂಚಿಸಬಹುದು. ಆದ್ದರಿಂದಲೇ Foucault ಇದನ್ನು 'ವಹಿಸಲ್ಪಟ್ಟಿದ್ದು' ಎಂದು ಕರೆಯುತ್ತಾನೆ. ಈ ಲೇಖನದ ದೃಷ್ಟಿಯಿಂದ ನೆನಪಿನಲ್ಲಿಡಬೇಕಾದ I-Slot ಗಳೆಂದರೆ ಲೇಖಕ, ಓದುಗ, ಬೋಧಕ, ಸಬಾಲ್ಟರ್ನ್ ಮತ್ತು ಇತಿಹಾಸಕಾರ. ಇತಿಹಾಸವು ನೈಜ ಘಟನೆಗಳೊಂದಿಗೆ ಮತ್ತು ಸಾಹಿತ್ಯವು ಕಾಲ್ಪನಿಕವಾದದ್ದರೊಡನೆ ವ್ಯವಹರಿಸುತ್ತದೆ ಎಂದಾದರೂ ಪ್ರಸ್ತುತದಲ್ಲಿ ಈ ವ್ಯತ್ಯಾಸವು 'a matter of degree and not of kind' ಇತಿಹಾಸವು ಸಾಹಿತ್ಯಕ್ಕಿಂತ ಹೆಚ್ಚು ನೈಜವಾಗಿ ಕಾಣಬಹುದು, ಆದರೆ ಇವೆರಡರಲ್ಲಿನ ವ್ಯತ್ಯಾಸವನ್ನು ನಿಭಾಯಿಸುವಾಗ ಗೌಪ್ಯವಾಗಿ ಇರುವ ಅಜೆಂಡಾವನ್ನು ಕೂಡ ಗಮನಿಸಬೇಕಾಗುತ್ತದೆ. ಇತಿಹಾಸಕಾರರು ಯಾವತ್ತೂ ಸಾಹಿತ್ಯಕ್ಕೆ ಪ್ರತಿರೋಧವನ್ನು ಒಡ್ಡುವ ರೀತಿಯಿಂದಲೇ ನಾವು ಸಾಹಿತ್ಯ ಮತ್ತು ಇತಿಹಾಸದ social connotation ಅನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ.

ಮಹಾಶ್ವೇತಾದೇವಿಯ ಕತೆಗಳಲ್ಲಿ ಐತಿಹಾಸಿಕ ಸಂಕಥನಗಳಿಗೆ ವಿಶೇಷ ಸ್ಥಾನವಿರುವುದನ್ನು ಗಮನಿಸಬೇಕು. ಇತಿಹಾಸದಲ್ಲಿನ ಪಾತ್ರಗಳು ಅವಳನ್ನು ಗಟ್ಟಿಯಾಗಿ ಸೆಳೆದಿವೆ. 1973–74 ರ ಕಾಲದಲ್ಲಿ ಬರೆದ ಅವಳ 'Hajar Chaurasir Ki Ma' 1950–60 ರ ದಶಕದ ಮುಖ್ಯವಾಹಿನಿ ಬಂಗಾಳಿ ಸಾಹಿತ್ಯದಲ್ಲಿ ಹೆಚ್ಚಾಗಿದ್ದ ರಸಭಾವಾತಿರೇಕವುಳ್ಳ ಶೈಲಿಯ ಗದ್ಯದಲ್ಲಿ ಕಂಡುಬರುತ್ತದೆ. ವೈಯುಕ್ತಿಕ ಸಂಘರ್ಷವನ್ನು ರಾಜಕೀಯ ಘಟನೆಯ ಮೂಲಕ ವ್ಯಕ್ತಪಡಿಸಿರುವ ರೀತಿಯನ್ನು ಗಮನಿಸಿದರೆ, ವೈಯುಕ್ತಿಕವಾದ ಅಥವಾ ಸಾಹಿತ್ಯಾತ್ಮಕವಾದ ರೀತಿಯಲ್ಲಿ ಐತಿಹಾಸಿಕವೆಂದು ಗ್ರಹಿಸಲ್ಪಟ್ಟ ರೂಪವನ್ನು ಕತೆಯಲ್ಲಿ ವ್ಯಕ್ತಪಡಿಸಲು ಮಹಾಶ್ವೇತಾದೇವಿಯು ಪ್ರಯತ್ನಿಸುತ್ತಿದ್ದಾಳೆ ಎಂಬುದನ್ನು ಕತೆಯ ಓದುಗರು ಗಮನಿಸಬಹುದು.

ಅಗ್ನಿಗರ್ಭ (1978) ದಲ್ಲಿರುವ ಕತೆಗಳು ಈ ಕಠಿಣ ನಡೆಯ ಹರವನ್ನು ತಿಳಿಸುತ್ತದೆ. ಅರಣ್ಯ ಅಧಿಕಾರ್(1977) ನಲ್ಲಿ ಗದ್ಯವು ಪೂರ್ಣಪ್ರಮಾಣದ 'ಐತಿಹಾಸಿಕ ಕಾದಂಬರಿ'ಯು ಕಲ್ಪಿತ ಕತೆಯಾಗಿ ರೂಪಗೊಳ್ಳುವುದನ್ನು ನೋಡಬಹುದು. ಈ ಎಲ್ಲಾ ನಡೆಯಲ್ಲಿ ವಾಸ್ತವತೆ (ಐತಿಹಾಸಿಕ ಘಟನೆ) ಮತ್ತು ಕಲ್ಪಿತ ಕತೆ(ಸಾಹಿತ್ಯ)ಯ ನಡುವಿನ ಭಿನ್ನಾಭಿಪ್ರಾಯ ಕಾರ್ಯರೂಪದಲ್ಲಿರುವುದನ್ನು ಕಾಣಬಹುದು. ಆದರೆ ತನ್ನ ಕತೆಗಳಿಗಾಗಿ ಆಕೆ ಆರಿಸಿಕೊಳ್ಳುವ ಐತಿಹಾಸಿಕ ವಿಷಯಗಳು ಸಮಗ್ರವಾದ ಸಂಶೋಧನೆಗೆ ಒಳಪಟ್ಟಿರುತ್ತವೆ.

ಈ ರೀತಿಯ ಕಲ್ಪಿತ ಕಥನಗಳು ಪರಿಣಾಮಕಾರಿಯಾಗ ಬೇಕಾದರೆ 'ನೈಜತೆಯ ಪರಿಣಾಮವನ್ನು ಅವಲಂಬಿಸಬೇಕಾಗುತ್ತದೆ. ಒಬ್ಬ ಜಶೋಧ (ಸ್ತನದಾಯಿನಿ), ಒಬ್ಬ ದ್ರೌಪದಿ(ಅಗ್ನಿಗರ್ಭ), ಒಬ್ಬ ಬಿರ್ಸಾ ಮುಂಡ (ಅರಣ್ಯರ್ ಅಧಿಕಾರ್)ನ/ಳಂತಹ ಪಾತ್ರಗಳು ಸಂಭವನೀಯ ವೆನ್ನಿಸುವುದು ಸಂಪ್ರದಾಯ ವಾದಿಗಳಿಂದ ಅಂಗೀಕರಿಸಿ ಒರೆಹಚ್ಚಲ್ಪಟ್ಟ ನಿರ್ದಿಷ್ಟ ಐತಿಹಾಸಿಕ ಕ್ಷಣದಲ್ಲಿ ಈ ಪಾತ್ರಗಳು ಸಬಾಲ್ಟರ್ನ್ ಆಗಿ ಅಸ್ತಿತ್ವದಲ್ಲಿದ್ದರು ಎಂಬುದು. ಸಬಾಲ್ಟರ್ನ್ ಇತಿಹಾಸಕಾರ ಒಂದು ಐತಿಹಾಸಿಕ ಕ್ಷಣವನ್ನು ಕಲ್ಪಿಸಿಕೊಂಡಾಗ, ನೆರಳಿನಂತಹ ಪಾತ್ರಗಳು, ಪ್ರತಿದಂಗೆ ಅಥವಾ ಪ್ರಬಲವಾದ ಜಂಡರ್ ಪಠ್ಯವಸ್ತುವನ್ನು ಬೆನ್ನಿಗಿಟ್ಟು ಕೊಂಡು ಕಥನವೊಂದರ ಲಯಕ್ಕೆ ಹೊಂದಿಕೊಳ್ಳುವಂತೆ ರೂಪಗೊಳ್ಳಬೇಕಾದಾಗ ಐತಿಹಾಸಿಕ ನೈಜತೆಯು ಸಾಹಿತ್ಯದ ಊಹೆಗಳಿಗಿಂತ ಭಿನ್ನವಾಗಿರಲಾರವು.

ಸಾಹಿತ್ಯವನ್ನು ಓದುವವರಾಗಲೀ, ಬರೆಯುವವರಾಗಲೀ, ಇತಿಹಾಸವನ್ನು ಓದುವವರಿಗಿಂತ /ಬರೆಯುವವರಿಗಿಂತ ಯಾವುದೇ ಮಟ್ಟದಲ್ಲೂ ಕಡಿಮೆ ಸಬಾಲ್ಟರ್ನ್ ಮಾನ್ಯತೆಯನ್ನು ಸಾಧಿಸಲಾರರು. ವ್ಯತ್ಯಾಸ ವೇನೆಂದರೆ ಸಬಾಲ್ಟರ್ನ್ ಎಂಬ ವ್ಯಕ್ತಿ/ವಿಷಯವು ಇತಿಹಾಸದಲ್ಲಿ ವಾಸ್ತವವಾಗಿದ್ದರೆ, ಸಾಹಿತ್ಯದಲ್ಲಿ ನೈಜವಾಗಿರುತ್ತದೆ. ಎರಡೂ ಕೂಡ ಒಂದರೊಳಗೊಂದು ಅಲ್ಪ ಪ್ರಮಾಣದಲ್ಲಿ ಮಿಳಿತವಾಗಿರುತ್ತವೆ. ಬರಹಗಾರನು/ಳು ಇದನ್ನು ಸಂಶೋಧಿಸುತ್ತಿದ್ದೇನೆ ಎಂದು ಸಾಧಿಸಿ ಅಂಗೀಕರಿಸುತ್ತಾನೆ. ಇತಿಹಾಸಕಾರ ಪ್ರತಿನಿಧೀಕರಣದ ಯಾಂತ್ರಿಕತೆಯನ್ನು ವಿಶ್ಲೇಷಿಸುವುದರ ಮೂಲಕ ಸಮರ್ಥಿಸಿಕೊಳ್ಳಬಹುದು.

## II

## ಲೇಖಕಿಯ ಓದು: ಕರ್ತೃವಿನ ಸ್ಥಾನ

ಮಹಾಶ್ವೇತಾದೇವಿಯ ಪ್ರಕಾರ 'ಸ್ತನದಾಯಿನಿ' ಕತೆಯು ನಿರ್ವಸಹಾತೀಕರಣಾನಂತರದ ಭಾರತದ ದೃಷ್ಟಾಂತ. ಕಥಾನಾಯಕಿ ಜಶೋಧಳ ರೀತಿಯಲ್ಲಿಯೇ ಭಾರತವು ಬಾಡಿಗೆ ತಾಯಿಯಾಗಿದ್ದಾಳೆ. ಎಲ್ಲಾ ವರ್ಗದ ಜನ, ಯುದ್ಧಾನಂತರದ ಶ್ರೀಮಂತರು, ಗಾಳಿಗೋಪುರ ಕಟ್ಟುವವರು, ದೇಸೀ ಅಧಿಕಾರಿವರ್ಗ, ಅನಿವಾಸಿಯರು,

ಪೋಷರಾಜ್ಯವನ್ನು ರಕ್ಷಿಸುತ್ತೇವೆಂದು ಪ್ರಮಾಣ ಮಾಡಿದವರು, ಎಲ್ಲರೂ ಕೂಡಿ ಆಕೆಯನ್ನು ದೂಷಿಸಿ, ಶೋಷಿಸುತ್ತಾರೆ. ಅವಳನ್ನು ಪೋಷಿಸಲು ಏನೂ ಮಾಡದಿದ್ದರೆ, ಮರಳಿ ಅವಳಿಗೆ ಏನನ್ನೂ ನೀಡದಿದ್ದರೆ, ವೈಜ್ಞಾನಿಕ ಸಹಾಯ ತುಂಬಾ ತಡವಾಗಿ ಬಂದರೆ, ಕಿತ್ತು ತಿನ್ನುವ ಕ್ಯಾನ್ಸರ್‌ನಿಂದಾಗಿ ಅವಳು ಸಾಯುತ್ತಾಳೆ. ಇದೇ ದೃಷ್ಟಾಂತವನ್ನು ಕತೆಯ ಕೊನೆಯವರೆಗೂ ವಿಸ್ತರಿಸಿದರೆ ಅದು ಈ ರೀತಿಯಾಗಿರಬಹುದು: 'ಭಾರತ'ವೆಂಬ ಐಡಿಯಲಾಜಿಕಲ್ ರಚನೆಯು ಆಳದಲ್ಲಿ ಹಿಂದು ಬಹುಜನರ ದೇವತೆ ಪೀಡಿತವಾದ ವ್ಯತಿರಿಕ್ತ sexism ಗೆ ಬಲಿಯಾಗಿದೆ. ಭಾರತವನ್ನು ದೇವತೆ–ಮಾತೆ (ಈ ತಾಯಿಯು ದಾಸಿಯೆಂಬ ಸೋಗಿನ ಸಾಧ್ಯತೆಯಿದೆ) ಯೆಂಬ ಸಾಂಸ್ಕೃತಿಕ ಸ್ವ–ಪ್ರತಿನಿಧೀಕರಣದ ಹೆಜಿಮನಿ ಆಳುತ್ತಿರುವುದರಿಂದ ಮತ್ತು ಇಂತಹ ಸ್ವ–ಪ್ರತಿನಿಧಿಕರಣ ಸಾಧ್ಯಮಾಡಿಕೊಡುವ ಅಪಾರ ನಿರೀಕ್ಷೆಯ ಹೊರೆಯಲ್ಲಿ ಭಾರತಿಯು ಕುಸಿಯುತ್ತಾಳೆ.

ಈ ಕುತೂಹಲಕರವಾದ ಓದು ಸಬಾಲ್ಟ್ರನ್ ಅಧ್ಯಯನದ ದೃಷ್ಟಿಯಿಂದ ಉಪಯೋಗವಾಗಲಾರದು. ಸಬಾಲ್ಟ್ರನ್ ತರಹದಲ್ಲಿಯೇ ಇಲ್ಲಿ ಭಾರತದ ಪ್ರತಿನಿಧೀಕರಣವು ಒಂದು ರೂಪಕ. ಈ ದೃಷ್ಟಾಂತದ ನಿಯಮದಂತೆ ರೂಪಕದ ಧ್ವನಿ ಮತ್ತು ವಾಹಕದ ಜೋಡಣೆಯ ತರ್ಕವು ಸಂಪೂರ್ಣ ವಾಗಿ ಸ್ಪಷ್ಟವಾಗಬೇಕು. ಇಂತಹ ಓದಿನ ಅತ್ಯಗತ್ಯತೆಯಿಂದ ವಾಹಕದ ನೈಜ ಪರಿಣಾಮವು ಮಂಕಾಗುತ್ತದೆ. ಉನ್ನತವಾದ ಅರ್ಥ ನೀಡುವಾಗ ಸಬಾಲ್ಟ್ರನ್ ಕೇವಲ ವಾಹಕ ನಾಗುತ್ತಾನೆ/ಳೆ. ಈ ತರಹದ ಓದಿನಿಂದಾಗಿ ನಾನು ಮೇಲೆ ಹೇಳಿದ ಇತಿಹಾಸಕಾರ ಮತ್ತು ಬರಹಗಾರನ ನಡುವಿನ ವಿನಿಮಯವನ್ನು ಇಲ್ಲಿ ಸಮರ್ಥಿಸಿಕೊಳ್ಳಲಾಗುವುದಿಲ್ಲ.

ನಿರ್ವಸಹಾತೀಕರಣದ ಸನ್ನಿವೇಶದಲ್ಲಿ ಸಬಾಲ್ಟ್ರನ್‌ಅನ್ನು ಈ ರೀತಿಯಾಗಿ ಓದಿಕೊಳ್ಳಲಾಗುತ್ತದೆ: ಸಾವ್ರಾಜ್ಯಶಾಹಿಯು ವಿರುದ್ಧ ಹುಟ್ಟಿಕೊಂಡ ರಾಷ್ಟ್ರೀಯವಾದಿ ಪ್ರತಿರೋಧದ ಕತೆಯನ್ನು ಸಂಬದ್ಧವಾಗಿರುವಂತೆ ತೆರೆದಿಡಬೇಕೆಂದರೆ; ದೇಸಿ ಸಬಾಲ್ಟ್ರನ್‌ನ ಪಾತ್ರವನ್ನು ಯುಕ್ತಿಯಿಂದ ಪಕ್ಕಕಿಡ ಬೇಕಾಗುತ್ತದೆ. ಪ್ರಾಂತೀಯ ಸಾಮ್ರಾಜ್ಯಶಾಹಿಯನ್ನು ಕ್ರೂಡೀಕರಿಸುವ ಮೊದಲ ಹಂತದಲ್ಲಿ ರಾಜಕೀಯ ಪ್ರತಿರೋಧವನ್ನು ಸಂಘಟಿಸುವುದು ಸಾಧ್ಯವಾಗಿರಲಿಲ್ಲ. ಸಾವ್ರಾಜ್ಯಶಾಹಿಯ ಸಾಂಸ್ಕೃತಿಕ ಅಂಶಗಳಿಗೆ ಪ್ರವೇಶವಾದಂತೆಲ್ಲಾ ವಸಾಹಾತು ರಾಷ್ಟ್ರಗಳು ರಾಷ್ಟ್ರೀಯತೆಯ ಭಾವಾತಿರೇಕಗಳಿಗೆ ಪ್ರವೇಶಪಡೆದವು. ಆಗಿನಿಂದ ನಿಜವಾದ ಸಾಮ್ರಾಜ್ಯಶಾಹಿ ವಿರೋಧಿ ಪ್ರತಿರೋಧ ಬೆಳೆಯಿತು.

ನೈಜತೆ ಮತ್ತು ಕಲ್ಪನೆಯ ನಡುವೆ ವೈರುಧ್ಯ ಗಳಿದ್ದ ಹಾಗೆ, ಸಿದ್ಧಾಂತದ ಆಚೆಗೆ ಅನ್ವಯಿಸುವ ಒಳ್ಳೆಯ ವಿವೇಕವೊಂದಿದೆ. ಈ ವಿವೇಕವನ್ನು ಉಳಿಸಿಕೊಳ್ಳ ಬೇಕಾದರೆ ಬಹಿಷ್ಕರಿಸಲ್ಪಟ್ಟ ಈ ಎರಡು ಅಂಶಗಳು ಕಾರ್ಯಪ್ರವೃತ್ತವಾಗಬೇಕು. ಮೊದಲನೆಯದು, ಸಾಮ್ರಾಜ್ಯಶಾಹಿ ರಂಗದಲ್ಲಿ ಮುಕ್ತಿಯ ಸಾಧ್ಯತೆಗಳು ಕೇವಲ ರಾಷ್ಟ್ರೀಯತೆಯ ಸಂಕಥನಗಳಿಗೆ ಮಾತ್ರವೇ ಇದೆ ಎನ್ನುವುದಾದರೆ, ಇಡೀ ಸಾಮ್ರಾಜ್ಯಶಾಹಿ ಮತ್ತು ಸಾಮ್ರಾಜ್ಯಶಾಹಿ ನಂತರದ ಶತಮಾನಗಳಲ್ಲಿ ಕಂಡು ಬಂದ ಅಸಂಖ್ಯಾತ ಸಬಾಲ್ಟ್ರನ್ ಪ್ರತಿದಂಗೆಗಳ ಉದಾಹರಣೆಗಳನ್ನು ಅಲಕ್ಷಿಸಬೇಕಾಗುತ್ತದೆ. ಮೇಲಾಗಿ ಪ್ರಾಂತೀಯ ಸಾಮ್ರಾಜ್ಯಶಾಹಿ ಭೌಗೋಳಿಕ–ರಾಜಕೀಯ ಸನ್ನಿವೇಶದಿಂದ ನವವಸಾಹಾತೀಕರಣದ ಸನ್ನಿವೇಶಕ್ಕೆ ಬದಲಾವಣೆ ತರಲು ಕಾರಣವಾಗಿದ್ದಂತಹ ರಾಷ್ಟ್ರೀಯ ವಾದಿ ಶಕ್ತಿಗಳೇ ಈ ದಂಗೆಗಳನ್ನು ಹತೋಟಿಯಲ್ಲಿ ಇಟ್ಟವು. ಎರಡನೆಯದಾಗಿ, ಸಾವ್ರಾಜ್ಯಶಾಹಿ ಸಂಸ್ಕೃತಿಯಿಂದ ಬಿಡುಗಡೆ ಪಡೆಯಬಹುದಾದ ಸಾಧ್ಯತೆಗಳನ್ನು ಮಾತ್ರವೇ ಪರಿಗಣಿಸಿದರೆ ವಸಾಹಾತು ರಂಗಕ್ಕೆ ರಾಷ್ಟ್ರೀಯ ಸಂಸ್ಕೃತಿಯು ಆಮದುಗೊಂಡಾಗ ಆದ ರೂಪವಿಕಾರಗಳು ಗಮನಿಸಲ್ಪಡುವುದಿಲ್ಲ. ಪ್ರತಿಯೊಬ್ಬರೂ ತಮ್ಮ ದೇಶದಿಂದ ಪಡೆಯುವುದಷ್ಟೇ ಅಲ್ಲದೆ, ತಮ್ಮ ರಾಷ್ಟ್ರಕ್ಕಾಗಿ ಏನನ್ನಾದರೂ ನೀಡಲೇ ಬೇಕು ಎಂಬುದು ಮಹಾಶ್ವೇತಾದೇವಿಯು ತನ್ನದೇ ಕತೆಯನ್ನು ಓದಿದಾಗ ನೀಡುವ ಒಟ್ಟಿನ ಸಾರಾಂಶ. ಇದು ಅನೇಕ ಉಗ್ರ ರಾಷ್ಟ್ರೀಯತೆಯ ಘೋಷಣೆಯನ್ನು ಹೋಲುತ್ತದೆ. "ಪ್ರೀತಿಯ ತಾಯಿ ಏಳು ಮಿಲಿಯನ್ ಬಂಗಾಳಿಯರು ನಿನ್ನ ಮಕ್ಕಳು, ಆದರೆ ನೀನೇಕೆ ಅವರನ್ನು ಮಾನವರನ್ನಾಗಿ ಮಾಡಲಿಲ್ಲ" ಎನ್ನುವ ಕವಿ ಟ್ಯಾಗೋರ್ ಅವರ ಸಾಲನ್ನು 'ಸ್ತನದಾಯಿನಿ' ಕತೆಯು ಧ್ವನಿಸುತ್ತದೆ. ಬರಹಗಾರಳೆಂಬ ಕರ್ತೃ ಸ್ಥಾನದ ಅವಶ್ಯಕತೆಯಿಂದ ಬರೆಯುವ ಲೇಖಕಿಗೆ ರಾಷ್ಟ್ರೀಯತೆಯೆಂಬ ಕಥನವು ಸಾಮ್ರಾಜ್ಯಶಾಹಿ ಸಂಸ್ಕೃತಿಯ ಉತ್ಪನ್ನವಾಗಿದೆ ಎಂಬುದು ಸ್ಪಷ್ಟವಾಗಿದೆ.

– ಡಾ॥ ಕೆ.ಬಿ. ಸರಸ್ವತಿ
ಸರ್ಕಾರಿ ಪದವಿ ಕಾಲೇಜು, ತಿಪಟೂರು
n.sarassri@rediffmail.com

ಪರಿಚಯ:

# ರೇಮಂಡ್ ವಿಲಿಯಮ್ಸ್‌ನ "The Analysis of Culture" ನ ವಿಶ್ಲೇಷಣೆ

(ಸಂಸ್ಕೃತಿ ಮತ್ತು ಸಂಸ್ಕೃತಿ ಅಧ್ಯಯನದ ಮರುಚಿಂತನೆ: ಪೂರ್ವದ ಓದು – ಪ್ರಸ್ತುತದ ಅರ್ಥೈಸಿಕೊಳ್ಳುವಿಕೆ – ಭವಿಷ್ಯದ ಚಿಂತನೆ ಸರಣಿಯ 3 ನೇ ಭಾಗ)

ಹಿಂದಿನ ಸಂಚಿಕೆಗಳಲ್ಲಿ ನಾವು "ಸಂಸ್ಕೃತಿ" ಪರಿಕಲ್ಪನೆಯ ಬಗೆಗೆ ಹಲವು ವ್ಯಾಖ್ಯಾನಗಳನ್ನು ತಿಳಿದುಕೊಂಡೆವು. ಮ್ಯಾಥ್ಯೂ ಆರ್ನಾಲ್ಡ್ ಸಂಸ್ಕೃತಿಯನ್ನು 'ಸಮತೋಲಿತ ಸ್ವಯಂ ಪರಿಪೂರ್ಣತೆ'(balanced self-perfection), 'ಮನಸ್ಸಿನ ಒಂದು ಸ್ಥಿತಿ, ಮನೋಭಾವ, ಸಂವೇದನಾಶೀಲತೆ' ಎಂದು ಕರೆದು 'ಬೌದ್ಧಿಕತೆ, ನೈತಿಕತೆ ಮತ್ತು ಶ್ರೇಷ್ಠ ಆಲೋಚನೆಗಳೇ ಅದಕ್ಕೆ ಆಧಾರ'; 'ಇವೆಲ್ಲವನ್ನೂ ಕೇವಲ ಉನ್ನತ ವರ್ಗದವರ ಸಂಸ್ಕೃತಿಯಲ್ಲಿ ಮಾತ್ರ ಕಾಣಲು ಸಾಧ್ಯ' ಎಂದು ಹೇಳುವ ಮೂಲಕ ಸಂಸ್ಕೃತಿಯನ್ನು 'ಗಂಭೀರ'(serious) ಮತ್ತು 'ಜನಪ್ರಿಯ'(popular) ಸಂಸ್ಕೃತಿ ಎಂದು ವಿಭಜಿಸಿದರೆ, ಎಫ್ ಆರ್ ಲೀವಿಸ್ ಕೂಡ 'ಉನ್ನತ ವರ್ಗದ ಸಂಸ್ಕೃತಿಯೇ ಶ್ರೇಷ್ಠ'; ಆಧುನಿಕ ಮಾಸ್ ಸಂಸ್ಕೃತಿಯ ಉದಯದಿಂದ ಮೂಲ ಬ್ರಿಟಿಷ್ ಸಂಸ್ಕೃತಿ ಅವನತಿಯಾಗುತ್ತಿದೆ'; 'ಈ ಆಧುನಿಕ ಪಾಪ್ಯುಲರ್ ಸಂಸ್ಕೃತಿಯು ಸಂಸ್ಕೃತಿಯೇ ಅಲ್ಲ' ಎಂದು ವಾದಿಸಿದ. ಇವರ ಹಾದಿಯಲ್ಲೇ ಬಂದ ರಸ್ಕಿನ್, ಕಾರ್ಲೈಲ್ ಮತ್ತಿತರರೂ ಕೂಡ ಇದೇ ರೀತಿಯಲ್ಲಿ ಆಧುನಿಕ ಸಂಸ್ಕೃತಿಯನ್ನು ಟೀಕಿಸಿದರು. ಜೊತೆಗೆ ಥಿಯೋಡರ್ ಅಡೋರ್ನೊ ಮತ್ತು ಮ್ಯಾಕ್ಸ್ ಹಾರ್ಕ್ ಹೈಮರ್ ಕೂಡ 'ಆಧುನಿಕ ಪಾಪ್ಯುಲರ್ ಸಂಸ್ಕೃತಿಯು ಸಂಸ್ಕೃತಿ ಕೈಗಾರಿಕೆಯ ಉತ್ಪನ್ನ'; money minded ಆಗಿದೆ' ಎಂದು ವ್ಯಾಖ್ಯಾನಿಸಿದರು.

ಆದರೆ ನಂತರ ಬಂದ ಚಿಂತಕರು ಅವರೆಲ್ಲರ ಸಂಸ್ಕೃತಿ ವಿಮರ್ಶೆಯನ್ನು ಕಟುವಾಗಿ ಟೀಕಿಸಿದರು. ಏಕೆಂದರೆ ಅವರೆಲ್ಲರ ಸಂಸ್ಕೃತಿ ವ್ಯಾಖ್ಯಾನಗಳಲ್ಲಿ ಹಲವಾರು ನ್ಯೂನತೆಗಳಿದ್ದವು. ಅವುಗಳಲ್ಲಿ ಮುಖ್ಯವಾಗಿ:

➢ಅವರೆಲ್ಲರ ದೃಷ್ಟಿಕೋನಗಳು ಸಂಸ್ಕೃತಿ ಯನ್ನು ಅರ್ಥ ಮಾಡಿಕೊಳ್ಳುವಲ್ಲಿ ನೆರವಾಗುವ ಬದಲು ಅದನ್ನು ಜಟಿಲಗೊಳಿಸಿದವು.

➢ಏಕೆಂದರೆ ಅವರ ಪ್ರಕಾರ ನಿಜವಾದ ಸಂಸ್ಕೃತಿ ಯೆಂಬುದು ಜನಸಾಮಾನ್ಯರಿಗೆ ಅರ್ಥವಾಗದ mind, intellect ನಂತಹ ಅಂಶಗಳಿಗೆ ಸಂಬಂಧಿಸಿದ್ದುದಾಗಿತ್ತು.

➢ಸಂಸ್ಕೃತಿ ಬಗೆಗಿನ ಅವರ ಚಿಂತನೆಗಳು ಅಸ್ಪಷ್ಟವಾಗಿದ್ದವು. ಅವರು ಸಮಾಜ ಮತ್ತು ಸಂಸ್ಕೃತಿಯ ಬಗ್ಗೆಯೇ ಮಾತನಾಡಿದರೂ ಸಮಾಜದ ಜನಸಾಮಾನ್ಯರನ್ನು ಹೊರಗಿಟ್ಟರು.

➢ ಎಲ್ಲಕ್ಕಿಂತ ಮುಖ್ಯವಾಗಿ ಅವರೆಲ್ಲರ ಚಿಂತನೆಗಳೂ 'ಎಲಿಟಿಸ್ಟ್' ಮತ್ತು 'high minority views of culture' ಗಳಾಗಿದ್ದವು.

➢ ಜೊತೆಗೆ ಅಡೋರ್ನೊ ಮತ್ತು ಹಾರ್ಕ್ ಹೈಮರ್‌ರ ಚಿಂತನೆಗಳನ್ನು ವಿಮರ್ಶಿಸುತ್ತ ಸಂಸ್ಕೃತಿಯು ಯಾವುದೇ ಕೈಗಾರಿಕೆಯ ಉತ್ಪನ್ನವಲ್ಲ; ಮಾನವನ ಜೀವನಕ್ಕೆ ಆಧುನಿಕತೆಯ touch ಸಿಕ್ಕಿದೆಯೆಂಬ ಮಾತ್ರಕ್ಕೆ ಜನಸಾಮಾನ್ಯರ ಸಂಸ್ಕೃತಿ ಕೆಟ್ಟದ್ದು, ಉನ್ನತ ವರ್ಗದವರ ಸಂಸ್ಕೃತಿ ಮಾತ್ರ ಶ್ರೇಷ್ಠ ಎಂಬ ವಾದಗಳಲ್ಲಿ ಹುರುಳಿಲ್ಲ.

➢ ಅಷ್ಟಕ್ಕೂ ಉನ್ನತ ಮತ್ತು ಹೀನ ಸಂಸ್ಕೃತಿಗಳೆಂಬ ವಿಂಗಡಣೆಯೇ ಸರಿಯಲ್ಲ.

ಹಳೆಯ ವ್ಯಾಖ್ಯಾನಗಳಲ್ಲಿದ್ದ ಈ ಎಲ್ಲಾ ಸಮಸ್ಯೆಗಳಿಂದಾಗಿ 1950–60ರ ದಶಕಗಳಲ್ಲಿ ಸಂಸ್ಕೃತಿಯನ್ನು ಹೊಸ ದೃಷ್ಟಿಕೋನಗಳಿಂದ ವ್ಯಾಖ್ಯಾನಿಸುವ ಪ್ರಯತ್ನಗಳಾದವು. ರೇಮಂಡ್ ವಿಲಿಯಮ್ಸ್, ಸ್ಟುವರ್ಟ್ ಹಾಲ್, ಟೋನಿ ಬೆನೆಟ್....... ಮೊದಲಾದವರು ಹಿಂದಿನವರು ತಿರಸ್ಕರಿಸಿದ್ದ ಆಧುನಿಕ ಜನಪ್ರಿಯ ಮಾಸ್ ಸಂಸ್ಕೃತಿಯನ್ನು ಎತ್ತಿಹಿಡಿದರು. ಈ ಮೂಲಕ "ಸಾಂಸ್ಕೃತಿಕವಾದ"ದ (culturalism) ಪರಿಕಲ್ಪನೆಯು 'aesthetic category' ಯಿಂದ 'socialist category' ಗೆ, 'elitist' ನಿಂದ 'democratic/anthropological' ಗೆ, 'minority' ಯಿಂದ 'majority' ಗೆ ಬದಲಾಯಿತು.

ರೆಮಂಡ್ ವಿಲಿಯಮ್ಸ್ ಇವರಲ್ಲೆಲ್ಲಾ ಅಗ್ರಗಣ್ಯ. ಸಂಸ್ಕೃತಿಯಲ್ಲಿ ಒಳ್ಳೆಯ ಮೌಲ್ಯಗಳನ್ನೇ ಅಪೇಕ್ಷಿಸುತ್ತಿದ್ದ ಆ ಸಂದರ್ಭದಲ್ಲಿ ತನ್ನ "The Long Revolution" (1958) ಕೃತಿಯೊಂದಿಗೆ ಕಾಣಿಸಿಕೊಂಡ ರೇಮಂಡ್ ವಿಲಿಯಮ್ಸ್ "ನಿಜವಾಗಿಯೂ ಸಂಸ್ಕೃತಿ ಎಂದರೆ ಏನು?" ಎಂಬ ಪ್ರಶ್ನೆಗೆ ಉತ್ತರ ಹುಡುಕಲು ಪ್ರಯತ್ನಿಸಿದ. ತನ್ನ ಮತ್ತೊಂದು ಕೃತಿ "Culture and Society" ಯಲ್ಲಿ ಆತ ಕಳೆದ ಸುಮಾರು 150 ವರ್ಷಗಳ ಸಂಸ್ಕೃತಿ ಬಗೆಗಿನ ಎಲ್ಲ ಅಂಶಗಳನ್ನೂ ವಿವರವಾಗಿ ಅಧ್ಯಯನ ಮಾಡಿದ. ತನ್ನ ಈ ಅಧ್ಯಯನದ ಆಧಾರದ ಮೇಲೆ ಸಂಸ್ಕೃತಿ ಬಗೆಗಿನ ಹಳೆಯ ಚಿಂತನೆಗಳನ್ನು ತಿರಸ್ಕರಿಸುವ ಸಾಮರ್ಥ್ಯ ಪಡೆದುಕೊಂಡ.

ಶ್ರಮ ವರ್ಗದ ಹಿನ್ನೆಲೆಯಲ್ಲೇ ಬೆಳೆದು ಬಂದ ವಿಲಿಯಮ್ಸ್ ಶ್ರಮ ಸಂಸ್ಕೃತಿಯನ್ನು ಬಹುವಾಗಿ ಮೆಚ್ಚಿಕೊಂಡಿದ್ದ. ಹೀಗಾಗಿಯೇ ಎಫ್ ಆರ್ ಲೀವಿಸ್‌ನ ವಿದ್ಯಾರ್ಥಿಯಾಗಿದ್ದರೂ, ಆತನ ಜ್ಞಾನ, ಚಿಂತನೆಗಳನ್ನೂ

ಪ್ರಶಂಸಿಸಿದರೂ, ಸಂಸ್ಕೃತಿ ವಿಶ್ಲೇಷಣೆಯಲ್ಲಿ ಲೀವಿಸ್‌ನ ದೃಷ್ಟಿಕೋನಗಳನ್ನು ಸಂಪೂರ್ಣವಾಗಿ ತಳ್ಳಿಹಾಕಿದ.

ತನ್ನ "The Analysis of Culture" ನಲ್ಲಿ ವಿಲಿಯಮ್ಸ್ ಸಂಸ್ಕೃತಿ ಬಗೆಗಿನ ಹಿಂದಿನ ವ್ಯಾಖ್ಯಾನಗಳನ್ನು ಮೂರು ಭಾಗಗಳಲ್ಲಿ ವಿಂಗಡಿಸಿ ಮೊದಲೆರಡನ್ನು ಕಟುವಾಗಿ ಟೀಕಿಸಿದ. ಮೊದಲನೆಯ ಭಾಗದಲ್ಲಿ "ಸಂಸ್ಕೃತಿಯೊಂದು 'ಆದರ್ಶ ಮೌಲ್ಯ'; ಮನುಷ್ಯನು ಪರಿಪೂರ್ಣನಾಗುವ ಪ್ರಕ್ರಿಯೆ" ಮತ್ತು "ಸಂಸ್ಕೃತಿ ವಿಶ್ಲೇಷಣೆಯೆಂಬುದು ಈ ಮೌಲ್ಯಗಳನ್ನು ಕಾಲಾತೀತವಾಗಿ ಹುಡುಕುವ ಪ್ರಕ್ರಿಯೆ" ಎಂದು ವ್ಯಾಖ್ಯಾನಿಸಿದ್ದ ಆರ್ನಾಲ್ಡಿಯನ್ ಮತ್ತು ಲೀವಿಸಿಸ್ಟ್ ಸಂಸ್ಕೃತಿ ಚಿಂತನೆಗಳು "ಹೇಗೆ ಕೇವಲ 'ಎಲಿಟಿಸ್ಟ್' ಆಗಿವೆ ಮತ್ತು ಹೇಗೆ ಬಹುಸಂಖ್ಯಾತ ಜನಸಾಮಾನ್ಯರನ್ನೂ, ಅವರ ಜೀವನದ ಸ್ಥಿತಿಗತಿಗಳನ್ನೂ ಹೊರಗಿಟ್ಟಿವೆ" ಎಂಬುದನ್ನು ವಿಲಿಯಮ್ಸ್ ಟೀಕಿಸಿದ.

ಎರಡನೆಯ ಭಾಗದಲ್ಲಿಯೂ ಈ ಹಿಂದೆ ಆರ್ನಾಲ್ಡ್, ಲೀವಿಸ್ ಮತ್ತಿತರೆ ಚಿಂತಕರು ವ್ಯಾಖ್ಯಾನಿಸಿದ್ದ "ಸಂಸ್ಕೃತಿಯು ಬೌದ್ಧಿಕತೆ, ಶ್ರೇಷ್ಠ ಚಿಂತನೆಗಳು, ಅನುಭವಗಳು, ಇತ್ಯಾದಿ ಅಂಶಗಳನ್ನೊಳಗೊಂಡ ಒಂದು ದಾಖಲೆ" ಎಂಬ ವಾದವನ್ನು ವಿಲಿಯಮ್ಸ್ ಸಂಪೂರ್ಣವಾಗಿ ತಳ್ಳಿಹಾಕಿದ.

ಮೂರನೆಯ ಭಾಗದಲ್ಲಿ "ಸಂಸ್ಕೃತಿ ಅಧ್ಯಯನದ ಬೈಬಲ್" ಎಂದೇ ಬಿಂಬಿತವಾಗಿರುವ ತನ್ನ "ಸಾಮಾಜಿಕ ದೃಷ್ಟಿಕೋನದ ಸಂಸ್ಕೃತಿ ವ್ಯಾಖ್ಯಾನ" ವನ್ನು (The Social Definition of Culture) ಮಂಡಿಸಿದ. ಇದಕ್ಕೆ ಅವನ ಮುಖ್ಯ ಉದ್ದೇಶ 'ಆರ್ನಾಲ್ಡಿಯನ್' ಮತ್ತು 'ಲೀವಿಸಿಸ್ಟ್' ವ್ಯಾಖ್ಯಾನಗಳಿಗೆ ಬದಲಿಯಾಗಿ ಅತ್ಯಂತ ಸಮರ್ಪಕವಾದ ಎಲ್ಲರನ್ನೂ ಒಳಗೊಂಡಂತಹ, ಎಲ್ಲರೂ ಒಪ್ಪಬಹುದಾದಂತಹ ವ್ಯಾಖ್ಯಾನವನ್ನು ನೀಡುವುದೇ ಆಗಿತ್ತು. ಹೀಗಾಗಿ ಅವನ "ಸಂಸ್ಕೃತಿಯ ಸಾಮಾಜಿಕ ವ್ಯಾಖ್ಯಾನ"ದ ಪ್ರಕಾರ:

❖"ಸಂಸ್ಕೃತಿ ಎಂಬುದು ಜೀವನದ ಒಂದು ಅಖಂಡ ಮಾರ್ಗ" (Culture is a whole way of life)

❖"ಸಂಸ್ಕೃತಿ ಎಂಬುದು ಅತ್ಯಂತ ಸಾಮಾನ್ಯವಾದದುದು" (Culture is ordinary)

❖"ಸಂಸ್ಕೃತಿ ಎಂಬುದು ಭೌತಿಕವಾದ ಅಭ್ಯಾಸಗಳ ಒಂದು ಸಮೂಹ" (Culture is a set of material practices)

❖ಸಂಸ್ಕೃತಿ ಎಂಬುದು ವಾಸ್ತವ ಅಸ್ತಿತ್ವದಲ್ಲಿರುವ ಜೀವನದ ಬಹುಮುಖ್ಯವಾದ ಒಂದು ಭಾಗ. (Culture is a part of real lived life)

ವಿಲಿಯಮ್ಸ್‌ನ ಮೊದಲ ವ್ಯಾಖ್ಯಾನದಲ್ಲಿ ಹಿಂದಿನ ಚಿಂತಕರು ವಿವರಿಸಿದ್ದ "ಸಂಸ್ಕೃತಿಯು ರೂಢಿ, ಪದ್ಧತಿ, ಸಂಪ್ರದಾಯ, ಆಚರಣೆ, ವೇಷ, ಆಹಾರ ಕ್ರಮ....... ಇತ್ಯಾದಿ ವಿಶೇಷ ಸಂದರ್ಭಗಳು ಹಾಗೂ ಅವುಗಳಲ್ಲಿನ ಶ್ರೇಷ್ಠತೆ" ಎಂಬ ವಾದವನ್ನು ತಿರಸ್ಕರಿಸಿ "ಸಂಸ್ಕೃತಿಯು ಮಾನವನ ಅಖಂಡ ಜೀವನದ ಮಾರ್ಗ" ಎನ್ನುವ ಮೂಲಕ "ಅದು ಎಲ್ಲ ಜನರನ್ನೂ ಅವರ ಇಡೀ ಜೀವನ ಕ್ರಮವನ್ನೂ ಒಳಗೊಂಡಿದೆ" ಎಂದು ವಿವರಿಸಿದ.

ತನ್ನ ಎರಡನೆಯ ಮತ್ತು ಮೂರನೆಯ ವ್ಯಾಖ್ಯಾನಗಳಲ್ಲಿ "ಸಂಸ್ಕೃತಿಯಲ್ಲಿ ವೈಶಿಷ್ಟ್ಯಗಳೆಂಬುದೇನೂ ಇಲ್ಲ; ಬದಲಾಗಿ ಸಾಮಾನ್ಯ ಜೀವನವೇ ಇಲ್ಲಿ ಸಂಸ್ಕೃತಿ ಎನ್ನಿಸಿಕೊಳ್ಳುತ್ತದೆ. ಸಂಸ್ಕೃತಿಯನ್ನು ನಾವು ಉನ್ನತ ವರ್ಗದ ಜನಜೀವನದಲ್ಲೆಲ್ಲೋ ನೀಡಬೇಕಿಲ್ಲ, ನಮ್ಮೆಲ್ಲರ ಜೀವನದ ಪ್ರತಿ ಹೆಜ್ಜೆಯಲ್ಲೂ ನಾವಿದನ್ನು ಕಾಣಬಹುದು; ಏಕೆಂದರೆ, ಸಮಾಜದಲ್ಲಿ ಜೀವಿಸಿರುವ 'ಪ್ರತಿ ವ್ಯಕ್ತಿಯೂ ತನ್ನ ನಿತ್ಯಜೀವನದ ಎಲ್ಲ ಚಟುವಟಿಕೆಗಳನ್ನೂ ಹಂಚಿಕೊಂಡಿರುತ್ತಾನೆ" ಎಂದು ಹೇಳುವ ಮೂಲಕ ಈ ಹಿಂದೆ ಸಂಸ್ಕೃತಿಯನ್ನು ಧರ್ಮ, ಸಂಪ್ರದಾಯಗಳ ದೃಷ್ಟಿಕೋನದಲ್ಲಿ ಅರ್ಥೈಸಿದ್ದುದನ್ನು ಅಲ್ಲಗಳೆದ.

ರೇಮಂಡ್ ವಿಲಿಯಮ್ಸ್‌ನ ಮೂರನೆಯ ವ್ಯಾಖ್ಯಾನ ಅತ್ಯಂತ ಮುಖ್ಯವಾದುದು. ಅವನ ಪ್ರಕಾರ, "ಸಂಸ್ಕೃತಿಯು ಭೌತಿಕ ಜೀವನದ ಅಭ್ಯಾಸಗಳಾಗಿರುವುದರಿಂದ ಅದು ಭೌತಿಕ ಪ್ರಪಂಚದ ಅಭಿವ್ಯಕ್ತಿಯಾಗಿದೆ; ಈ ಭೌತಿಕ ಅಭ್ಯಾಸಗಳು ಸಮಾಜದಲ್ಲಿ ಕೆಲವು ಸಂಕೇತಗಳ ರೂಪದಲ್ಲಿರುತ್ತವೆ ಮತ್ತು ಪ್ರತಿನಿತ್ಯ ಸೃಷ್ಟಿಯಾಗುವ ಇವು ಜನರಿಗೆ ವರ್ಗಾವಣೆಯಾಗುತ್ತಿರುತ್ತವೆ ಮತ್ತು ಅವರ ನಡುವೆ ಹಂಚಿಕೆಯಾಗಿ ಅನುಭೋಗಿಸಲ್ಪಡುತ್ತಿರುತ್ತವೆ. ಇದೊಂದು ನಿರಂತರ ಪ್ರಕ್ರಿಯೆಯಾಗಿದ್ದು ಇವುಗಳ ಒಟ್ಟು ಪ್ರತಿರೂಪವೇ ಸಂಸ್ಕೃತಿಯಾಗಿದೆ." ಇದು ಮುಂದೆ ಸಂಸ್ಕೃತಿ ಅಧ್ಯಯನದಲ್ಲಿ "ಸಾಂಸ್ಕೃತಿಕ ಭೌತಿಕವಾದ" (Cultural Materialism) ಎಂಬ ಹೊಸ ಅಧ್ಯಯನ ಕ್ಷೇತ್ರದ ಉದಯಕ್ಕೆ ಕಾರಣವಾಯಿತು.

ತನ್ನ ನಾಲ್ಕನೆಯ ವ್ಯಾಖ್ಯಾನದಲ್ಲಿ "ಸಂಸ್ಕೃತಿಯು ಪದ್ಧತಿ, ಸಂಪ್ರದಾಯಗಳಂತೆ ಅಮೂರ್ತವಾದುದಲ್ಲ; ಅದು ನಮ್ಮ ವಾಸ್ತವ ಜೀವನದ ಎಲ್ಲ ವರ್ತನೆಗಳ ಪ್ರತಿರೂಪ" ಎನ್ನುವ ಮೂಲಕ ಸಂಸ್ಕೃತಿ ಬಗೆಗಿದ್ದ ಅಸ್ಪಷ್ಟತೆಗಳನ್ನು ದೂರ ಮಾಡಿದ.

ಹೀಗೆ ಸಂಸ್ಕೃತಿ ಬಗೆಗಿನ ಅವನ "ಸಾಮಾಜಿಕ ವ್ಯಾಖ್ಯಾನ" ಸಂಸ್ಕೃತಿಯನ್ನು ಕೆಲವೇ ಸಂಖ್ಯೆಗಳಲ್ಲಿರುವ

ಉನ್ನತ ವರ್ಗದವರ ದೃಷ್ಟಿಕೋನದಿಂದ ಹೊರತಂದು ಸಮಾಜದ ಬಹುಸಂಖ್ಯೆಯ ಜನಸಾಮಾನ್ಯರ ದೃಷ್ಟಿಕೋನ ದಿಂದ ವಿವರಿಸಿದ್ದರಿಂದ ಹಾಗೂ ಸಂಸ್ಕೃತಿಯ 'ಎಲಿಟಿಸ್ಟ್' ದೃಷ್ಟಿಕೋನವು 'ಮಾನವಶಾಸ್ತ್ರೀಯ ದೃಷ್ಟಿಕೋನ'ವಾಗಿ ಬದಲಾದದ್ದರಿಂದ (ಏಕೆಂದರೆ, ಪ್ರತಿ ಮಾನವಶಾಸ್ತ್ರಜ್ಞನೂ ಸಮಾಜ/ಸಂಸ್ಕೃತಿಯನ್ನು serious-popular ಅಥವಾ high-low ಎಂಬ ಬೇಧ-ಭಾವಗಳಿಂದಾಗಲೀ ಅಥವಾ ಅಂತಹ ಯಾವುದೇ ಶ್ರೇಣಿಗಳಿಂದಾಗಲೀ ನೋಡದೆ, ಅದನ್ನು ಅಖಂಡವಾಗಿ ಅಭ್ಯಸಿಸುತ್ತಾನೆ.) ಸಂಸ್ಕೃತಿ ಬಗೆಗಿನ ಅವನ ಈ ವ್ಯಾಖ್ಯಾನಗಳು ಇಡೀ ಸಂಸ್ಕೃತಿ ಅಧ್ಯಯನದಲ್ಲೇ guiding principle ಗಳಾಗಿವೆ.

ರೇಮಂಡ್ ವಿಲಿಯಮ್ಸ್ ಸಂಸ್ಕೃತಿಯನ್ನು ವಿಶ್ಲೇಷಿಸಲು "ಸಾಮಾಜಿಕ ಅಭ್ಯಾಸಗಳು/ವರ್ತನೆಗಳು" (Social Practices)[2] ಎಂಬ ಪರಿಭಾಷೆಯನ್ನು ಬಳಸುತ್ತಾನೆ. ಅವನ ಪ್ರಕಾರ, "ಸಂಸ್ಕೃತಿಯ ಅಧ್ಯಯನಕಾರ ಕೇವಲ ಕಲಾತ್ಮಕವಾದ ಅಥವಾ ಈಸ್ಥೆಟಿಕ್ ಅಂಶಗಳನ್ನಷ್ಟೇ ಪರಿಗಣಿಸದೆ, ಸಾಮಾಜಿಕ ಅಭ್ಯಾಸಗಳನ್ನೂ ಅಭ್ಯಸಿಸಬೇಕು. ಏಕೆಂದರೆ, ಸಂಸ್ಕೃತಿ ಯಾವಾಗಲೂ ಈ ತರಹದ ಸಾಮಾಜಿಕ ಅಭ್ಯಾಸಗಳಲ್ಲೇ ಪ್ರತಿಬಿಂಬಿಸಲ್ಪಡುತ್ತಿರುತ್ತದೆ."

ರೇಮಂಡ್ ವಿಲಿಯಮ್ಸ್‌ನ "ಸಂಸ್ಕೃತಿಯ ಸಾಮಾಜಿಕ ವ್ಯಾಖ್ಯಾನ"ದ ಮುಂದಿನ ಭಾಗ ಮತ್ತೆರಡು ಬಹುಮುಖ್ಯ ಸಂಗತಿಗಳನ್ನೊಳಗೊಂಡಿದೆ:

* ಭಾವನೆಗಳ ಸ್ವರೂಪ (The Structure of Feelings):
* ಆಯ್ಕೆ ಮಾಡಲ್ಪಟ್ಟಿರುವ ಪರಂಪರೆಗಳು (The Selective Traditions):

ರೇಮಂಡ್ ವಿಲಿಯಮ್ಸ್ ಇಲ್ಲಿ ಸಂಸ್ಕೃತಿಯ ಜೀವಂತ ಸ್ಥಿತಿ(livingness)ಯ ಬಗ್ಗೆ ಮಾತನಾಡುತ್ತಾನೆ. ಅಂದರೆ ಅವನೇ ವಿವರಿಸುವಂತೆ ಇಂದಿನ ಸಂಸ್ಕೃತಿಯೇ ನಾಳೆಯೂ ಇರದಿರಬಹುದು ಅಥವಾ ಕಾಲದ ಬದಲಾವಣೆ /ಇತರೆ ಅಂಶಗಳ ಪ್ರಭಾವದಿಂದ ಸಂಸ್ಕೃತಿ ಬದಲಾಗ 'ಬಹುದು. ಅದಕ್ಕೋಸ್ಕರ ಸಂಸ್ಕೃತಿ ಅಧ್ಯಯನ ಕಾರರು ತಮ್ಮ ಪ್ರಸ್ತುತದ ಸಂಸ್ಕೃತಿಯನ್ನೇ ಅಧ್ಯಯನ ಮಾಡಬೇಕು. ಒಂದು ವೇಳೆ ಅವರು ತಮ್ಮ ಕಾಲಕ್ಕಿಂತಲೂ ಹಿಂದಿನ ಸಂಸ್ಕೃತಿ ಯನ್ನು ತಮ್ಮ ಅಧ್ಯಯನಕ್ಕೆ ಬಳಸಿಕೊಂಡರೆ, ಅವರಿಗೆ ಅದರ ಬಗ್ಗೆ ಖಚಿತವಾದ ನೈಜ ಚಿತ್ರಣ ಖಂಡಿತವಾಗಿಯೂ ದೊರೆಯಲಾರದು. ಏಕೆಂದರೆ ಆ ಕಾಲದ ಸಂಸ್ಕೃತಿ ಹೇಗಿತ್ತೆಂದು ತಿಳಿಯಲು ಇರುವ ಆಧಾರಗಳು genuine/authentic ಆಗಿರುತ್ತವೆಂಬುದನ್ನು ನಂಬುವುದು ತಪ್ಪಾಗುತ್ತದೆ. ಏಕೆಂದರೆ, ಆ ಆಧಾರಗಳನ್ನು ರೂಪಿಸಿದವರು ಪ್ರತಿಯೊಂದನ್ನೂ ದಾಖಲಿಸದೆ ಕೆಲವನ್ನು ಮಾತ್ರ ಆಯ್ಕೆ ಮಾಡಿಕೊಂಡಿರ ಬಹುದು. ಅಲ್ಲದೆ, ಈ ರೀತಿ "ಆಯ್ಕೆ ಮಾಡಿಕೊಂಡ ಸಂಸ್ಕೃತಿಯ ಬಗೆಗಿನ ಮಾಹಿತಿಗಳು" (Selective Traditions) ಸತ್ಯವೇ ಆಗಿಲ್ಲದಿರಬಹುದು. ಏಕೆಂದರೆ ಅವುಗಳ ಆಯ್ಕೆಯ ಹಿಂದೆ, ಅವುಗಳನ್ನು ದಾಖಲಿಸಿದವರ "ವೈಯಕ್ತಿಕ ಭಾವನೆಗಳು, ಉದಾಹರಣೆಗೆ: ವರ್ಗ, ಜನಾಂಗ, ಧರ್ಮ ಪ್ರಜ್ಞೆ ಇಲ್ಲವೇ ತಮ್ಮ ವೈಯಕ್ತಿಕ ಇಷ್ಟ-ಕಷ್ಟಗಳು" (Structure of Feelings) ಪ್ರಭಾವ ಬೀರಿರುವ ಸಾಧ್ಯತೆ ಗಳಿರುವುದು ಸಹಜ. ಅದಕ್ಕಾಗಿಯೇ ಪ್ರತಿ ಅಧ್ಯಯನ ಕಾರನೂ ತನ್ನ ಕಾಲದ ಸಂಸ್ಕೃತಿಯನ್ನು ಅಭ್ಯಸಿಸಬೇಕು.

ಹೀಗೆ ರೇಮಂಡ್ ವಿಲಿಯಮ್ಸ್‌ನ ಸಂಸ್ಕೃತಿ ವಿಶ್ಲೇಷಣೆಯು ಸಂಪೂರ್ಣವಾಗಿ ಸಾಮಾಜಿಕ ದೃಷ್ಟಿಕೋನವಾದ್ದರಿಂದ ಮತ್ತು ಎಲ್ಲ ಜನರನ್ನೂ-ಜನಜೀವನವನ್ನೂ ಒಳಗೊಂಡಿದ್ದರಿಂದ ಅದಕ್ಕೆ ಅಪಾರ ಜನಮನ್ನಣೆ ದೊರೆಯಿತು. ಇಂದಿಗೂ ಸಂಸ್ಕೃತಿ ಅಧ್ಯಯನ ಕ್ಷೇತ್ರಕ್ಕೆ ಆಧಾರ ಸ್ತಂಭವಾಗಿರುವ ಅವನ ಚಿಂತನೆಗಳು ಅವನನ್ನು ಒಂದು ಮಹತ್ವದ ಕೇಂದ್ರ ಸ್ಥಾನದಲ್ಲಿರಿಸಿವೆ. ಅಲ್ಲದೆ, ಅವನ ಸಂಸ್ಕೃತಿ ವಿಶ್ಲೇಷಣೆಗಳು ನಂತರದ ಚಿಂತಕರ ಸಂಸ್ಕೃತಿ ಅಧ್ಯಯನಕ್ಕೆ ಮಾರ್ಗದರ್ಶಿಯಾಗಿವೆ. ಈ ಬಗ್ಗೆ ಮುಂದಿನ ಸಂಚಿಕೆಯಲ್ಲಿ ತಿಳಿಯೋಣ.

(.....ಮುಂದುವರೆಯುವುದು.)

ಅಡಿಟಿಪ್ಪಣಿಗಳು:

*1 ಸಾಂಸ್ಕೃತಿಕ ಭೌತಿಕವಾದ (Cultural Materialism): ರೇಮಂಡ್ ವಿಲಿಯಮ್ಸ್ ಸಂಸ್ಕೃತಿಯನ್ನು "ಭೌತಿಕವಾದ ಅಭ್ಯಾಸಗಳ ಪ್ರತಿರೂಪ"ವೆಂದು ವ್ಯಾಖ್ಯಾನಿಸಿದ ನಂತರ ಸಂಸ್ಕೃತಿ ಅಧ್ಯಯನದಲ್ಲಿ ಹುಟ್ಟಿಕೊಂಡ ಹೊಸ ಅಧ್ಯಯನ ಕ್ಷೇತ್ರ

*2 ಸಾಮಾಜಿಕ ಅಭ್ಯಾಸಗಳು (Social Practices): ಈ ಪರಿಭಾಷೆಯನ್ನು ಮೊದಲ ಬಾರಿಗೆ ಪರಿಚಯಿಸಿದ್ದು ಲೂಯಿ ಅಲ್ತೂಸರ್. ನಂತರ ರೇಮಂಡ್ ವಿಲಿಯಮ್ಸ್ ತನ್ನ ಸಂಸ್ಕೃತಿ ವಿಶ್ಲೇಷಣೆಯಲ್ಲಿ ಇದನ್ನು ಬಳಸಿಕೊಂಡು "ಸಂಸ್ಕೃತಿಯು ಸಾಮಾಜಿಕ ಅಭ್ಯಾಸಗಳಲ್ಲಿ ಅಭಿವ್ಯಕ್ತವಾಗುವ ಮಾನವ ವರ್ತನೆಗಳ ಪ್ರತಿರೂಪ" ಎಂದು ವ್ಯಾಖ್ಯಾನಿಸಿದನು.

- ಸಿದ್ಧರಾಮಯ್ಯ ಡಿ.ಎಂ
ಸರ್ಕಾರಿ ಪದವಿ ಕಾಲೇಜು, ತಿಪಟೂರು
kalpasahyadri@gmail.com

## ಕವಿತೆ | ನನ್ನೊಳಗೆ ಮಲಗಿದೆ

ಒಂದು ನೆನಪು ನನ್ನೊಳಗೆ ಮಲಗಿದೆ
ಆಳವಾದ ಬಾವಿಯೊಳಗಿನ ಬಿಳಿ ಕಲ್ಲಿನಂತೆ
ಇದನ್ನು ಮರೆಯಲಾಗಲಿ ಇದರೊಂದಿಗೆ
ಜಗಳವಾಗಲಿ ಸಾಧ್ಯವಿಲ್ಲ.
ಇದು ಸಂತೋಷ ಮತ್ತು ನೋವು.
ಯಾರಾದರೂ ನನ್ನ ಕಣ್ಣುಗಳನ್ನು ನೇರವಾಗಿ
ದಿಟ್ಟಿಸುತ್ತಿದ್ದರೆ ಹಾಗೆ ದಿಟ್ಟಿಸಲು ಆಗುವುದಿಲ್ಲ
ಮತ್ತು ವಿಚಾರವಂತರಾಗಲು ವಿಫಲರಾಗುವುದಿಲ್ಲ.
ಯಾವುದೋ ದುರಂತ ಕಥೆಯನ್ನು
ಕೇಳಿಸಿಕೊಳ್ಳುವರಂತೆ ಹೆಚ್ಚು ಮೌನವಾಗುವರು,
ದುಃಖಿಗೊಳ್ಳುವರು.
ನನಗೆ ಗೊತ್ತು ದೇವರು ಮನುಷ್ಯರನ್ನು
ವಸ್ತುಗಳನ್ನಾಗಿಸಿದ್ದಾನೆ.
ಅವರ ಅದ್ಭುತವಾದ ವೇದನೆಗಳನ್ನು
ಜೀವಂತವಾಗಿಟ್ಟುಕೊಳ್ಳಲು
ಅವರ ಪ್ರಜ್ಞೆಯನ್ನು ಜೀವಂತ ಮತ್ತು
ಮುಕ್ತವಾಗಿಸಿದ್ದಾನೆ.
ನೀನು ನನ್ನೊಳಗೆ ರೂಪಾಂತರಗೊಂಡಿರುವೆ.

**ಮೂಲ: ಅನ್ನಅಕ್ ಮತೋವ್(ರಷ್ಯ)**
**ಕನ್ನಡಕ್ಕೆ: ಕಾಂತರಾಜು. ಕೆ**

Prathispanda Kannada Monthly literary cultural periodical Title verification no.- KARKAN 22840/10/1/2012 TC

**Book Post**

ವಿಳಾಸ:
ಪ್ರತಿಸ್ಪಂದ
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು - 572201

Editor and Publisher : K.R.Basavaraju, Farm House No : 107 (25)
Kanchagatta New Extension , Tiptur- 572201, Karnataka. Email : prathispandha@gmail.com
Printed at : Mithra DTP Works, Nittur